ಸಂಪುಟ ೧೧ ಸಂಚಿಕೆ ೪ ಡಿಸೆಂಬರ್ 1990

# ಬ್ಯಾಂಕಿಂಗ್ ಪ್ರಪಂಚ



ವಾರ್ಷಿಕ ಚಂದಾ : ರೂ. 15
ಆಜೀವ ಚಂದಾ : ರೂ. 150

## ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦ ೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

## ಕರ್ನಾಟಕದ ಜನತೆಗೆ ರಾಜ್ಯೋತ್ಸವದ
## ಹಾರ್ದಿಕ ಶುಭಾಶಯಗಳು

## ಈ ರಾಜ್ಯೋತ್ಸವವು ತಮಗೆಲ್ಲ
## ಸುಖ, ಶಾಂತಿ, ಸಮೃದ್ಧಿಯನ್ನು ತರಲಿ

# ಮನವಿ

ನಮ್ಮ ರಾಷ್ಟ್ರವು ಇಂದು ಅತ್ಯಂತ ಕಷ್ಟ ಪರಿಸ್ಥಿತಿಯನ್ನು ಎದುರಿಸುತ್ತಿದೆ. ಯಾವ ದೇಶ ತನ್ನ ಸರ್ವಧರ್ಮಸಮನ್ವಯಕ್ಕೆ ಹೆಮ್ಮೆಪಡುತ್ತದೆಯೋ ಅದು ಈಗ ಅಪಾಯಕಾರಿ ಸ್ಥಿತಿಯಲ್ಲಿದೆ. ಇದೆಲ್ಲ ನಡೆಯುತ್ತಿರುವುದು ಧರ್ಮದ ಹೆಸರಿನಲ್ಲಿ. ಹೌದು ಇದು ನಿಜಕ್ಕೂ ಅತ್ಯಂತ ದೊಡ್ಡ ಸವಾಲಾಗಿದೆ.

ಮತೀಯ ಸೌಹಾರ್ದತೆ ಹಾಗೂ ಧಾರ್ಮಿಕ ಸಹಬಾಳ್ವೆಗೆ ಕರ್ನಾಟಕ ರಾಜ್ಯ ಹೆಸರಾಗಿದೆ. ಇಲ್ಲಿ ಎಲ್ಲ ಜಾತಿ, ಮತ ಹಾಗೂ ಧರ್ಮದ ಜನರು ಶಾಂತಿಯಿಂದ ಒಟ್ಟಿಗೆ ಸ್ನೇಹಿತರಂತೆ ಬಾಳುತ್ತಿದ್ದು, ರಾಜ್ಯದ, ದೇಶದ ಪ್ರಗತಿಗೆ ಕೊಡುಗೆ ನೀಡಿದ್ದಾರೆ.

ಕೆಲವೊಂದು ಮತೀಯ ಗಲಭೆಗಳು ದೇಶದ ಜನರ ನಡುವೆ ಬಾಂಧವ್ಯ ಹಾಗೂ ಪ್ರೀತಿವಿಶ್ವಾಸಗಳನ್ನು ಹಾಳು ಮಾಡಬೇಕೆ? ಧರ್ಮದ ಭೇದಭಾವಗಳು ಜನರ ನಡುವೆ ಅಡ್ಡಗೋಡೆಯಾಗಬೇಕೆ? ಮತೀಯ ಗಲಭೆಗಳು ಈ ರಾಜ್ಯದ ಹಾಗೂ ದೇಶದ ಪ್ರಗತಿಗೆ ಅಡ್ಡಿ ಉಂಟುಮಾಡಲು ಅವಕಾಶವೀಯಬೇಕೆ? ಈ ರಾಜ್ಯೋತ್ಸವದ ಸಂದರ್ಭದಲ್ಲಿ ಕರ್ನಾಟಕದ ಜನತೆಗೆ ವಿನಂತಿಸುವುದೇನೆಂದರೆ ಹಿಂಸಾಚಾರ ಹಾಗೂ ದ್ವೇಷವನ್ನು ಹತ್ತಿಕ್ಕಿ ನಾವೆಲ್ಲರು ಒಮ್ಮತದಿಂದ ಬಾಳೋಣ. ಜಾತಿ ಹಾಗೂ ಮತೀಯ ಭೇದಗಳು ನಮ್ಮನ್ನು ಅಗಲಿಸದಿರಲಿ. ನಾವೆಲ್ಲರು ಒಂದೇ ಎಂಬ ಸಿದ್ಧಾಂತ ಗೆಲ್ಲಲಿ. ನಮ್ಮ ಚೈತನ್ಯವು ಸದೃಢ ಹಾಗೂ ಜಾತ್ಯತೀತ ರಾಜ್ಯ ನಿರ್ಮಾಣಕ್ಕೆ ಸಹಕಾರಿಯಾಗಲಿ. ಮತೀಯ ಸೌಹಾರ್ದತೆ ಹಾಗೂ ಶಾಂತಿ ಕಾಪಾಡುವಲ್ಲಿ ನಮ್ಮ ರಾಜ್ಯ ಮೇಲ್ಪಂಕ್ತಿಯಾಗಲಿ. ಎಲ್ಲರೂ ಹೆಮ್ಮೆಪಡುವಂಥ ರಾಜ್ಯವಾಗಿರಲಿ. ಶಾಂತಿಗೆ ಸದವಕಾಶವನ್ನು ನೀಡೋಣ.

**ಎಸ್. ಬಂಗಾರಪ್ಪ**
ಮುಖ್ಯಮಂತ್ರಿ

“ಕರ್ನಾಟಕ ವಾರ್ತೆ”

ಸಂಪುಟ ೧೧ ಡಿಸೆಂಬರ್ ೧೯೯೦ ಸಂಚಿಕೆ ೪

## ಸಂಪಾದಕೀಯ

# ಮೈಸೂರು ಬ್ಯಾಂಕ್ ಮತ್ತು ಕನ್ನಡ

ಮೈಸೂರು ಬ್ಯಾಂಕು ಕರ್ನಾಟಕದಲ್ಲಿ ಹುಟ್ಟಿ ಬೆಳೆದ ಸಂಸ್ಥೆ. ಹಳೆಯ ಮೈಸೂರಿನ ಜೀವಶಿಲ್ಪಿ, ಕೃಷ್ಣರಾಜಸಾಗರದ ನಿರ್ಮಾಪಕ, ಭದ್ರಾವತಿ ಕಬ್ಬಿಣ–ಉಕ್ಕು ಕಾರ್ಖಾನೆಯೇ ಮುಂತಾದ ಅನೇಕ ಅನೇಕ ಕೈಗಾರಿಕೋದ್ಯಮಗಳ ಪಿತ, 'ಕೈಗಾರಿಕೆಯನ್ನು ಬೆಳಸಿ, ಇಲ್ಲವೇ ಅಳಿಯುವಿರಿ!' ಎಂದು ದೇಶವನ್ನೆಚ್ಚರಿಸಿದ ಮಹಾದ್ರಷ್ಟಾರ, ಗ್ರಾಮೀಣ ಅಭಿವೃದ್ಧಿಗಾಗಿ ಅರ್ಧ ಶತಮಾನಕ್ಕೂ ಹಿಂದೆಯೇ ನೀಲನಕ್ಷೆ ತಯಾರಿಸಿ ಜಾರಿಗೆ ತಂದ ರಚನಾತ್ಮಕ ಕಾರ್ಯಕರ್ತ, ಖಾಸಗಿ ಮತ್ತು ಸರ್ಕಾರಿ ವಲಯಗಳೆರಡಕ್ಕೂ ಅವಕಾಶವಿರುವ ಸಂಮಿಶ್ರ ಅರ್ಥವ್ಯವಸ್ಥೆಯ ನೀತಿಯನ್ನು ಪ್ರಪ್ರಥಮವಾಗಿ ಪ್ರಯೋಗ ಮಾಡಿ ತೋರಿಸಿಕೊಟ್ಟ ಕಾರ್ಯಪಟು, ಆಧುನಿಕ ಆರ್ಥಿಕ ಯೋಜನಾ ಪರಿಕಲ್ಪನೆಯ ಕನಸುಗಾರ, ಧೀಮಂತ ಆಡಳಿತಗಾರ ಹಾಗೂ ರಾಜನೀತಿಜ್ಞ, ಭಾರತರತ್ನ ಡಾ. ಎಂ. ವಿಶ್ವೇಶ್ವರಯ್ಯನವರ ದೂರದೃಷ್ಟಿಯ ಫಲವಾಗಿ ಸ್ಥಾಪಿತವಾದ ಮೈಸೂರು ಬ್ಯಾಂಕು ಹಳೆಯ ಮೈಸೂರು ಸಂಸ್ಥಾನದ ಆರ್ಥಿಕಾಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸಿದ ಹೆಮ್ಮೆಯ ಸಂಸ್ಥೆ. 'ಮೈಸೂರೆನ್ನಿ, ಕನ್ನಡವೆನ್ನಿ, ಮಲ್ಲಿಗೆಯೆನ್ನಿ, ಒಂದೆ!' ಎಂಬ ಮೈಸೂರು ಮಲ್ಲಿಗೆಯ ಕವಿ ನರಸಿಂಹಸ್ವಾಮಿಯವರ ಕಲ್ಪನೆಯನ್ನು ಮುಂದುವರಿಸಿ ಈ ಪಟ್ಟಿಯನ್ನು ಬೆಳೆಸುವುದಾದರೆ ಮೈಸೂರು ಬ್ಯಾಂಕನ್ನೂ ಇದರಲ್ಲಿ ಸೇರಿಸಬೇಕು. ಮೈಸೂರಿನ ಶ್ರೀಗಂಧದಂತೆ, ರೇಷ್ಮೆಯಂತೆ ಈ ಬ್ಯಾಂಕಿನ ಕಂಪೂ ವಿಸ್ತಾರವಾದ್ದು.

ಹಳೆಯ ಮೈಸೂರು ಸಂಸ್ಥಾನದಲ್ಲಿ ಸರ್ಕಾರದ ವ್ಯವಹಾರವನ್ನು ನಡಸುವ ಪ್ರತಿಷ್ಠೆಯ ಬ್ಯಾಂಕಾಗಿ ಬೆಳೆದ ಮೈಸೂರು ಬ್ಯಾಂಕಿನ ಈ ಮಹತ್ತ್ವಪೂರ್ಣ ಸ್ಥಾನವೇ ಮುಂದೆ ಇದರ ಸಂಘಟನಾತ್ಮಕ ಪರಿವರ್ತನೆಗೆ ಕಾರಣವಾಯಿತು. ಬ್ರಿಟಿಷ್ ಸಾಮ್ರಾಜ್ಯವಾದದ ಕೈಗೂಸಾಗಿ ಬೆಳೆದಿದ್ದ ಇಂಪೀರಿಯಲ್ ಬ್ಯಾಂಕನ್ನು ಭಾರತೀಯ ಸ್ಟೇಟ್ ಬ್ಯಾಂಕ್ ಆಗಿ ಪರಿವರ್ತಿಸಿದಾಗ ಇತರ ಹಲವು ಮಾಜಿ ದೇಶೀಯ ಸಂಸ್ಥಾನಗಳ ಪ್ರತಿಷ್ಠಿತ ಬ್ಯಾಂಕುಗಳಂತೆ ಮೈಸೂರು ಬ್ಯಾಂಕೂ ಸ್ಟೇಟ್ ಬ್ಯಾಂಕ್ ಕಕ್ಷೆಯೊಳಕ್ಕೆ ಬಂತು; ಮೊದಲು ಭಾರತೀಯ ಸ್ಟೇಟ್ ಬ್ಯಾಂಕಿನ ಸಹಾಯಕ ಬ್ಯಾಂಕಾಯಿತು; ಅನಂತರ ಅದರ ಸಹವರ್ತಿ ಬ್ಯಾಂಕಾಯಿತು. ಗ್ರಾಮೀಣ ಪ್ರದೇಶಗಳಲ್ಲಿ ಬ್ಯಾಂಕಿಂಗ್ ಜಾಲವನ್ನು ವಿಸ್ತರಿಸಬೇಕೆಂಬ ಅಖಿಲ ಭಾರತ ಗ್ರಾಮೀಣ ಉದರಿ ಸರ್ವೇಕ್ಷಣಾ ಸಮಿತಿಯ ಸಲಹೆಗಳಿಗೆ ಅನುಗುಣವಾಗಿ ರೂಪಿತವಾದ ಈ ವ್ಯವಸ್ಥೆಯಲ್ಲಿ ಸ್ಟೇಟ್ ಬ್ಯಾಂಕಿನ ಗುಂಪಿನ ಇತರ ಬ್ಯಾಂಕುಗಳಂತೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಹೊಣೆಯೂ ಹೆಚ್ಚಿತು; ಸೇವಾವಕಾಶಗಳೂ ವಿಸ್ತರಿಸಿದುವು. ಆದರೆ ಇದರೊಂದಿಗೇ ಇದರ ಸ್ವಾತಂತ್ರ್ಯವೂ ಕುಂಠಿತವಾಯಿತು. ಪ್ರಧಾನ ಕಲಾವಿದನಾಗಿದ್ದವನನ್ನು ಪಕ್ಕವಾದ್ಯಗಾರನಾಗಿ ಮಾಡಿದಂತಾಯಿತು. ಕೆಲವು ವಿಚಾರಗಳಲ್ಲಿ ಅದರ ವೈಶಿಷ್ಟ್ಯ ಕರಗಿಹೋಯಿತು. ಹತ್ತರ ಕೂಡ ಹನ್ನೊಂದು—ಎಂಬ ಹಾಗಾಯಿತು. ಅರಳುವ ಗುಲಾಬಿಗೆ ಕಬ್ಬಿಣದ ಚೌಕಟ್ಟು ಹಾಕಿದಂತಾಯಿತು. ಮುಂದೆ ಕೇಂದ್ರ ಸರ್ಕಾರ ಹಲವು ಪ್ರಮುಖ ಬ್ಯಾಂಕುಗಳನ್ನು ರಾಷ್ಟ್ರೀಕರಿಸಿ ಅವಕ್ಕೂ ಗ್ರಾಮೀಣ ಆರ್ಥಿಕ ಬದುಕಿನ ಮಹಾ ಪರಿವರ್ತನೆಯ ಹೊಣೆಯನ್ನು ವಹಿಸಿಕೊಟ್ಟಾಗ ಸ್ಟೇಟ್ ಬ್ಯಾಂಕ್ ಗುಂಪಿನ ಅರ್ಥವೇ ಕುಂದಿತೆನ್ನಬೇಕು. ಈ ಬ್ಯಾಂಕುಗಳನ್ನು ಹಿಂದಿನಂತೆ ಸ್ವತಂತ್ರ ಬ್ಯಾಂಕಿಂಗ್ ಸಂಸ್ಥೆಗಳಾಗಿ ಪರಿವರ್ತಿಸುವುದು ಉಚಿತ. ಆದರೆ ಹೊಸ ಹಾದಿ ಹಿಡಿದೂ ಹಳೆಯ ಹಾದಿ ಬಿಟ್ಟುಕೊಡದ ವಿಚಿತ್ರ ನೀತಿ ನಮ್ಮ ಸರ್ಕಾರದ್ದು. ಹೀಗಾಗಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನಂಥ ಬ್ಯಾಂಕುಗಳು ಇಲ್ಲಿಯೂ ಸಲ್ಲದ, ಅಲ್ಲಿಯೂ ಸಲ್ಲದ ವಿಲಕ್ಷಣ ಸಂಸ್ಥೆಗಳಾಗಿವೆ. ಸ್ಟೇಟ್ ಬ್ಯಾಂಕಿನ ಚೌಕಟ್ಟು ಇಲ್ಲದಿದ್ದರೆ ಬಹುಶಃ ಮೈಸೂರು ಬ್ಯಾಂಕು ಇನ್ನೂ ವೈಶಿಷ್ಟ್ಯಪೂರ್ಣವಾಗಿ ವಿಕಾಸ ಹೊಂದುತ್ತಿತ್ತು.

ಆದರೂ ಮೈಸೂರು ಬ್ಯಾಂಕು ಇಂದಿಗೂ ಮುಖ್ಯವಾಗಿ ಕರ್ನಾಟಕದ ಬ್ಯಾಂಕಾಗಿಯೇ ಉಳಿದಿದೆಯೆನ್ನಬೇಕು, ಕರ್ನಾಟಕದಲ್ಲೇ—ಮುಖ್ಯವಾಗಿ ಹಳೆಯ ಮೈಸೂರು ಭಾಗದಲ್ಲಿ—ಇದರ ಶಾಖೆಗಳ ಜಾಲ ಹೆಚ್ಚಾಗಿ ವಿಸ್ತರಿಸಿದೆ. ಗಂಗೆ–ಯಮುನೆಗಳ ಸಂಗಮವಾದ ಮೇಲೂ ಕಣ್ಣು ಹಾಯುವಷ್ಟು ದೂರ ಅವೆರಡೂ ನದಿಗಳ ಧಾರೆಗಳು ಬೇರೆಬೇರೆಯಾಗಿಯೇ ತೋರುವಂತೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಅನೇಕ ಉಸಿರು ಸಿಕ್ಕಿಸುವ ನಿರ್ಬಂಧಗಳ ನಡುವೆಯೂ, ಹೊರಗಿನ ಗಾಳಿಯನ್ನು ಎದುರಿಸಿಯೂ ಇಂದಿಗೂ ತನ್ನ ಕೆಲವು ಪರಂಪರಾಗತ ಸಲ್ಲಕ್ಷಣಗಳನ್ನು ಉಳಿಸಿಕೊಂಡು ಬಂದಿದೆ. ಇದು ಸ್ವಲ್ಪ ಮಟ್ಟಿಗೆ ಆಸೆ ಕೊನರಿಸುವ ಸಂಗತಿ.

ಇಂದು ಭಾರತಾದ್ಯಂತ ಶಾಖಾ ಜಾಲಗಳನ್ನು ಹಬ್ಬಿಸಿಕೊಂಡಿರುವ ಅನೇಕ ಬೃಹತ್ ಬ್ಯಾಂಕಿಂಗ್ ಸಂಸ್ಥೆಗಳು ಕರ್ನಾಟಕದಲ್ಲಿ ಹುಟ್ಟಿ ಬೆಳೆದವೇ ಆದರೂ, ಕನ್ನಡದ ಹೆಸರು ಹೇಳುವುದೂ ಮಹಾ ಪಾಪ, ಅದು ಕಿವಿಯ ಮೇಲೆ ಬಿದ್ದರೆ ಮೈಲಿಗೆ—ಎಂಬುದು ಆ ಬ್ಯಾಂಕುಗಳ ಮನೋಭಾವ. ನಮ್ಮ ಸಂವಿಧಾನದಲ್ಲಿ ಪ್ರತಿ ರಾಜ್ಯಕ್ಕೂ ಸಂಬಂಧಿಸಿದಂತೆ ಮೂರು ಭಾಷೆಗಳನ್ನು ಮಾನ್ಯ ಮಾಡಲಾಗಿದೆಯೆಂಬುದನ್ನು ಅವು ಮರೆತಿವೆ. ಪ್ರತಿ ರಾಜ್ಯದಲ್ಲೂ ಆ ರಾಜ್ಯದ ಭಾಷೆ ಮೊದಲು, ಆಮೇಲೆ ಹಿಂದಿ, ಅನಂತರ ಇಂಗ್ಲಿಷ್ ಎಂಬುದು ಅಂಗೀಕೃತ ಸೂತ್ರವಾಗಿದ್ದರೂ, ಆ ಬ್ಯಾಂಕುಗಳು ಕನ್ನಡಕ್ಕೆ ಏನೇನೂ ಸ್ಥಾನವನ್ನೇ ನೀಡದಿರುವುದು ದುರ್ದೈವದ ಸಂಗತಿ. ಅವು ಹಿಂದಿಯೊಂದನ್ನೇ ಮುಂದೆ ಚಾಚಲು ಹರಿಹಾಯುತ್ತಿವೆ, ಎತ್ತು ಹಾರುವ ಮುಂಚೆ ಗೋಣಿ ಹಾರಿತು ಎಂಬ ಹಾಗೆ ವರ್ತಿಸುತ್ತಿವೆ. ಹಿಂದಿಯನ್ನು ತಲೆಯ ಮೇಲೆ ಹೊತ್ತು ನಡೆದರೆ ಆಳರಸರನ್ನು ಮೆಚ್ಚಿಸಬಹುದೆಂಬ ಸ್ವಾರ್ಥ ಇವುಗಳದು. ಕನ್ನಡದ ಸೊಲ್ಲೆತ್ತುವುದೇ ಅಪರಾಧ ಎಂಬ ಭೀತಿ ಇವುಗಳ ವ್ಯವಸ್ಥಾಪಕ ವರ್ಗಕ್ಕೆ. ಗುಲಾಮ ಮನೋಭಾವದ ವ್ಯವಸ್ಥಾಪಕ ಸಮೂಹದಿಂದ ನಿಜಕ್ಕೂ ಸಾಮಾಜಿಕ ವಿಕಾಸ ಸಾಧ್ಯವಾಗದು. ಬ್ಯಾಂಕಿಂಗ್ ಒಂದು ವಿಶಿಷ್ಟ ಕಲೆ. ಅದು ಬರೀ ಶುಷ್ಕ ಕಂದಾಚಾರವಲ್ಲ, ಹೇಳಿ ಬರೆಯಿಸಿದ 'ಮಕ್ಕಿಕಾ ಮಕ್ಕಿ'ಯಲ್ಲ. ಜನಸಾಮಾನ್ಯರು ಆಡುವ ಭಾಷೆಯಲ್ಲಿ ವ್ಯವಹಾರ ಮಾಡುವುದಕ್ಕಿಂತ ಹೆಚ್ಚು ನ್ಯಾಯಬದ್ಧವಾದ್ದೂ, ಸಹಜವಾದ್ದೂ, ಜನಹಿತದೊಂದಿಗೆ ಸ್ವಹಿತವನ್ನೂ ಸಂಸ್ಥಾ ಹಿತವನ್ನೂ ಸಾಧಿಸು

[26ನೇ ಪುಟ ನೋಡಿ

ಮುಂಬರುವ ದಿನಗಳ ಚಾವಣಿ ವಿನ್ಯಾಸವನ್ನು ಇಂದು ಕರ್ನಾಟಕದಲ್ಲಿ ಉಪಯೋಗಿಸಲಾಗುತ್ತಿದೆ. ಸುಸ್ಥಾಪಿತ ತಂತ್ರಜ್ಞಾನದ ಹಾಗೂ ಮಿತವ್ಯಯಕಾರಿಯಾದ 'ನಾಗಲಕ್ಷ್ಮಿ' ಹಾಸನ್ನು ಅತ್ಯಂತ ತ್ವರಿತವಾದ ಹಾಗು ತ್ರಾಸರಹಿತ ನಿರ್ಮಾಣಕ್ಕೆ ಬಳಸಲಾಗುತ್ತಿದೆ.

## ಪ್ರಧಾನ ವೈಲಕ್ಷಣಗಳು

★ ಭಾಗಶಃ ಪೂರ್ವವಿನ್ಯಾಸಿತ ಘಟಕಾಂಶಗಳನ್ನು, ಅವುದು ಮಾಡಿಕೊಂಡ ಸ್ವಯಂಚಲಿ ಯಂತ್ರಗಳಿಂದ ತಯಾರಿಸಲಾಗುವುದು ಮತ್ತು ಅಲ್ಪಾವಧಿಯಲ್ಲಿ ಸರಬರಾಜು ಮಾಡಲಾಗುವುದು.

★ ಟೊಳ್ಳು ಚದರ ದಿಮ್ಮಿಗಳು ಶಬ್ದ ಮತ್ತು ಉಷ್ಣತೆಯನ್ನು ಬಹುಮಟ್ಟಿಗೆ ನಿರೋಧಿಸುತ್ತವೆ.

★ ರಚನೆಯ ಕೆಲಸ ಸಂಪೂರ್ಣವಾಗಿ ವರ್ಜ್ಯ; ಒಂದು ವಾರದ ಮಟ್ಟಿಗೆ ಸರಳ ಸಜ್ಜಾಗಳನ್ನು ಉಪಯೋಗಿಸಲಾಗುವುದು.

★ ಪ್ರಯಾಸದ ಬಲವರ್ಧನೆ, ಕತ್ತರಿಸುವಿಕೆ, ಭಾಗಿಸುವಿಕೆ, ಮತ್ತು ಕಟ್ಟುವಿಕೆಯನ್ನು ಕೇವಲ ಬೆಸದ ಜಾಲರಿಯ ಮಟ್ಟಕ್ಕೆ ಇಳಿಸಲಾಗಿದೆ. ಇದರಿಂದ ಉಕ್ಕಿನಲ್ಲಿ ಶೇ. 50ರಷ್ಟು ಉಳಿತಾಯ.

★ ನಿವೇಶನಲ್ಲಿ ಕಾಂಕ್ರೀಟ್ ಪ್ರಮಾಣ ಮತ್ತು ಕಾಂಕ್ರೀಟ್ ಹಾಕುವ ಸಮಯದಲ್ಲಿ ಶೇ. 25 ಉಳಿತಾಯ.

★ ಪೂರ್ವವಿನ್ಯಾಸಿತ ಘಟಕಾಂಶಗಳನ್ನು ನಿಲ್ಲಿಸಲು ಕೇವಲ ಇಬ್ಬರು ಸಾಕು.

★ ಸಾಮೂಹಿಕ ವಸತಿ ಹಾಗು ಸಾಲು ಮನೆಗಳಿಗೆ ಅತ್ಯಂತ ಯೋಗ್ಯವಾಗಿದೆ.

★ ಕರ್ನಾಟಕ ಭೂ ಸೇನಾ ನಿಗಮ, ಬಳ್ಳಾರಿ, ಇಲ್ಲಿ 142 ಗುಂಪು ಮನೆಗಳನ್ನು ಕ್ಲುಪ್ತ ಕಾಲದಲ್ಲಿ ನಿರ್ಮಿಸಿದ್ದು ಒಂದು ದಾಖಲೆ.

★ ಮೈಸೂರು, ಹೊಸಪೇಟೆ, ಬೆಂಗಳೂರು ಮುಂತಾದೆಡೆಗಳಲ್ಲಿ ಪ್ರತಿಷ್ಠಿತ ಹೋಟೆಲ್ ಮತ್ತು ಖಾಸಗಿ ಕಟ್ಟಡಗಳ ಚಾವಣಿಯ ಕೆಲಸ ಪ್ರಗತಿಯಲ್ಲಿದೆ.

ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ

# ನಾಗಲಕ್ಷ್ಮಿ ಬಿಲ್ಡ್‌ವೆಲ್ ಕಾಂಕ್ರೀಟ್ (ಪ್ರೈ) ಲಿಮಿಟೆಡ್

ದೂರವಾಣಿ: 645148

ನೋಂದಾಯಿತ ಕಛೇರಿ

**'ಶ್ರೀನಿವಾಸ'**

**36 ಮತ್ತು 37, 8ನೇ ಅಡ್ಡರಸ್ತೆ**
**ಐ. ಟಿ. ಐ. ಕಾಲೋನಿ, 31ನೇ ಮುಖ್ಯರಸ್ತೆ**
**ಜೆ. ಪಿ. ನಗರ, 1ನೇ ಹಂತ, ಬೆಂಗಳೂರು 560078**

# ಸಲಹೆಗಳು-ಮೆಚ್ಚುಗೆಗಳು

**'ಬ್ಯಾಂಕಿಂಗ್ ಪ್ರಪಂಚ' ನಿಮಗೆ ಒಪ್ಪಿಗೆಯಾಗಿದೆಯೆ? ಇಲ್ಲವೆ? ಏಕೆ? ಇದರ ವೈಶಿಷ್ಟ್ಯಗಳೂ ಅರೆಕೊರೆಗಳೂ ಯಾವುವು? ಇದನ್ನು ಉತ್ತಮಪಡಿಸಲು ನಿಮ್ಮ ಸಲಹೆಗಳೇನು? ಈ ಪ್ರಶ್ನೆಗಳಿಗೆ ಓದುಗರಿಂದ ಉತ್ತರ ಬಯಸುತ್ತಿದ್ದೇವೆ. ಕಳೆದ ಸಂಚಿಕೆಯಲ್ಲಿ ಪ್ರಕಟಿಸಲಾಗಿದ್ದ ಈ ಪ್ರಶ್ನೆಗಳಿಗೆ ಉತ್ತರವಾಗಿ ಬಂದಿದೆ ಈ ಪ್ರತಿಕ್ರಿಯೆ. ಈ ಕುರಿತು ೨೫೦ ಪದಗಳಿಗೆ ಮೀರದಂತೆ ಓದುಗರಿಂದ ಬರುವ ಬರಹಗಳಿಗೆ ಸದಾ ಸ್ವಾಗತ.**

**ಎಂ. ಶಶಿಧರ**
**ಮೈಸೂರು ಬ್ಯಾಂಕು, ಕಣಕಟ್ಟೆ**

'ಬ್ಯಾಂಕಿಂಗ್ ಪ್ರಪಂಚ'ವನ್ನು ಬಹುಮಟ್ಟಿಗೆ ತಪ್ಪದೇ ಓದುತ್ತಿರುವೆ. ಆಜೀವ ಚಂದಾದಾರರಲ್ಲಿ ನಾನೂ ಒಬ್ಬನಾಗಿರುವುದರಿಂದ ಮತ್ತು ಪತ್ರಿಕೆಯು ರವಾನೆ ವ್ಯವಸ್ಥೆ ಉತ್ತಮವಾಗಿರುವುದರಿಂದ ಪತ್ರಿಕೆಯು ನಿಯಮಿತವಾಗಿ ತಲುಪುತ್ತದೆ. ಅದರಲ್ಲಿ ಇರುವ ಹಲವು ವಿಚಾರಪ್ರದ ಲೇಖನಗಳು ಕುತೂಹಲ ಕೆರಳಿಸುವುದರಿಂದ 'ಬ್ಯಾಂಕಿಂಗ್ ಪ್ರಪಂಚ'ವನ್ನು ಪೂರ್ತಿಯಾಗಿ ಓದುವ ಪರಿಪಾಠ ಬೆಳೆದುಬಂದಿದೆ. ಮಧ್ಯದಲ್ಲಿ ಕೆಲವು ಸಂಚಿಕೆಗಳನ್ನು ಗಮನವಿಟ್ಟು ಓದಲಿಲ್ಲವೆಂದು ತಪ್ಪೊಪ್ಪಿಕೊಳ್ಳಬೇಕು. ಆಗ ನಾನು ಅಂಚೆ ಮೂಲಕ ಕನ್ನಡ ಎಂ.ಎ. ಓದುತ್ತಿದ್ದು, ಕನ್ನಡದ ಪ್ರಾಚೀನ-ಮಧ್ಯಯುಗದ, ಆಧುನಿಕ ಸಾಹಿತ್ಯದ ದಿಗ್ಗಜಗಳ ಕೃತಿರತ್ನಗಳೆಂಬ ಮಹಾವಟಗಳಡಿ ನಿಂತು ಕಣ್ಣುಕಣ್ಣು ಬಿಡುತ್ತಿದ್ದುದರಿಂದ ದಿನಪತ್ರಿಕೆಯಾದಿಯಾಗಿ ಎಲ್ಲಾ ಪತ್ರಿಕೆಗಳ ಪಠಣವನ್ನು ನಿಲ್ಲಿಸಿದ್ದೆ.

ಆದರೂ 'ಬ್ಯಾಂಕಿಂಗ್ ಪ್ರಪಂಚ'ದ ವೈಶಿಷ್ಟ್ಯವೆಂದರೆ, ಅದನ್ನು ಒಮ್ಮೆಯಾದರೂ ಗಮನಿಸಲೇಬೇಕಾದ ವ್ಯಕ್ತಿತ್ವವನ್ನು ಪಡೆದುಕೊಂಡಿದೆ. ಇತ್ತೀಚಿನ ರಿಸರ್ವ್ ಬ್ಯಾಂಕ್ ನೀತಿ, ಹೊಸ ಬ್ಯಾಂಕಿಂಗ್ ಅಲೆಗಳು, ಅಂತರರಾಷ್ಟ್ರೀಯ ಬ್ಯಾಂಕಿಂಗಿನ ಕೌತುಕಗಳು ಮೊದಲಾದ ವಿಚಾರಗಳನ್ನು ಒಮ್ಮೆಯಾದರೂ ಓದಲೇಬೇಕಾಗುತ್ತಿತ್ತು. ಅನುವಾದಿತ ಲೇಖನದ ತಳದಲ್ಲಿ ಕಮ್ಮಟಿಗರ ಪಟ್ಟಿ ಇದ್ದುದರಿಂದ, ನಮ್ಮ ಗೆಳೆಯರ್ಯಾರಾದರೂ ಈಚಿನ ಕಮ್ಮಟದಲ್ಲಿ ಭಾಗವಹಿಸಿರುವರೆ ಎಂಬುದನ್ನು ಹುಡುಕಲು ಕುತೂಹಲವಿರುತ್ತಿತ್ತು. ಕನ್ನಡದಲ್ಲಿ ಬ್ಯಾಂಕಿಂಗ್ ಚಿಂತನೆ ನಡೆಯುತ್ತಿದೆ ಎಂಬ ವಿಚಾರವೆ ವಿಶೇಷವಾದುದು—ಅದರ ಫಲಗಳು 'ಬ್ಯಾಂಕಿಂಗ್ ಪ್ರಪಂಚ'ದಲ್ಲಿ ಬರುವುದು ವೈಶಿಷ್ಟ್ಯವಲ್ಲವೆ? ಪಕ್ಷಿಶಾಸ್ತ್ರ, ಭೂಗರ್ಭಶಾಸ್ತ್ರ, ಹವಾಮಾನ ವಿಜ್ಞಾನ ಅಥವಾ ಬಾಹ್ಯಾಕಾಶ ವಿಜ್ಞಾನ ಮೊದಲಾದ ಹಲವಾರು ಕ್ಷೇತ್ರಗಳಲ್ಲಿ ಕನ್ನಡದ ಚಿಂತನೆ ನಡೆಯುತ್ತಿರುವುದಕ್ಕೆ ಪುರಾವೆಗಳಿಲ್ಲ. ಅಲ್ಲೆಲ್ಲ ಅನುವಾದ ಅಥವಾ ಆಧಾರಿತ ಲೇಖನಗಳ ತಯಾರಿ ಮಾತ್ರ ನಡೆದಿದೆ. ಕನ್ನಡದಲ್ಲಿನ ಬ್ಯಾಂಕಿಂಗ್ ಚಿಂತನೆ ಈ ಘಟ್ಟವನ್ನು ಮೀರಿ, ಹೊಸ ಸಿದ್ಧಾಂತ-ವಿಚಾರಗಳನ್ನು ಮಂಡಿಸುವತ್ತ ದಾಪುಗಾಲು ಹಾಕಿದ್ದು ಸ್ಪಷ್ಟ ಮತ್ತು 'ಬ್ಯಾಂಕಿಂಗ್ ಪ್ರಪಂಚ' ಇದಕ್ಕೆ ಪ್ರಮುಖ ಚೇತನ ಎಂಬುದು ಸ್ಪಷ್ಟ.

ಪತ್ರಿಕೆಯ ಅರೆಕೊರೆಗಳು ಎದ್ದುಕಾಣಿಸುವಂತಹವಲ್ಲ. ಇದರಲ್ಲಿನ ಜಾಹೀರಾತುಗಳು ಕನ್ನಡದಲ್ಲಿರಬೇಕು ಎಂಬುದು ನನ್ನದೊಂದು ಸಲಹೆ. ಇದರಲ್ಲಿನ ಲೇಖನಗಳು ಶಾಸ್ತ್ರೀಯ ವಿಚಾರಗಳಿಗೆ ಮೀಸಲಾಗಿರುವುದು ಸ್ಪಷ್ಟ. ಆದರೆ ಬ್ಯಾಂಕ್ ಉದ್ಯೋಗಿಯೋರ್ವನ ಪ್ರಪಂಚದಲ್ಲಿ, ಹಾಸ್ಯ-ಉದ್ರೇಕ-ಕೋಪ ಮೊದಲಾದ ಅನುಭವಗಳಾಗುವುದು ಸಹಜ; ಅಂತಹ ಅನುಭವಗಳಿಗೆ ಒಂದು ಪುಟವನ್ನು ಮೀಸಲಿಡಬಹುದು. ಉದಾಹರಣೆಗೆ 'ಕಸ್ತೂರಿ' ಪತ್ರಿಕೆಯಲ್ಲಿ ಪ್ರಕಟವಾಗುವ 'ಇದುವೆ ಜೀವ—ಇದು ಜೀವನ' ಎಂಬ ಸ್ಥಿರಶೀರ್ಷಿಕೆಯಲ್ಲಿ ಪ್ರಕಟವಾಗುವ ರೀತಿಯ ಕಿರುಬರಹಗಳಿಗೆ ಒಂದು ಅಥವಾ ಎರಡು ಪುಟಗಳನ್ನು ಮೀಸಲಿಡಬಹುದು ಎಂಬುದು ಇನ್ನೊಂದು ಸಲಹೆ.

'ಬ್ಯಾಂಕಿಂಗ್ ಪ್ರಪಂಚ'ದಲ್ಲಿ ಪ್ರಕಟಿಸಲು ಲೇಖನಗಳ ಅಭಾವವಿರುವುದು ನಿಜವೆ ಎಂಬ ಅನುಮಾನ ಆಗಾಗ ಬರುತ್ತದೆ. ಸೆಪ್ಟೆಂಬರ್ 1990ರ ಸಂಚಿಕೆಯಲ್ಲಿ ಬಂದ ಲೇಖನಗಳನ್ನು ಬರೆದವರೆಲ್ಲರೂ ಸಮನ್ವಯ ಸಮಿತಿಯ ಪದಾಧಿಕಾರಿಗಳು ಅಥವಾ ಅವರಿಗೆ ನಿಕಟರು. ಕಮ್ಮಟಗಳಿಂದಾಗಿ 'ಹೊಸ ಲೇಖಕರ ಪಡೆ' ತಯಾರಾಗುತ್ತದೆ ಎಂಬ ಆಶಯ ಎಷ್ಟರಮಟ್ಟಿಗೆ ಯಶಸ್ವಿ ಎಂಬುದು ಚರ್ಚಾರ್ಹ. ಹೊಸಬರು ಹೆಚ್ಚಾಗಿ ಬರೆಯಬೇಕು; ನಿಜ. ಆದರೆ ಅದು ಹಳಬರ ತಪ್ಪಂತೂ ಅಲ್ಲವೇ ಅಲ್ಲ! ಈ ನಿಟ್ಟಿನಲ್ಲಿ ಒಂದು ಸೂಚನೆ—ಪತ್ರಿಕೆಯಲ್ಲಿ ಲೇಖನ ಪ್ರಕಟವಾದಾಗ ಲೇಖಕರಿಗೆ ಒಂದು ಗೌರವ ಪ್ರತಿಯನ್ನು ಕಳಿಸಬಹುದು. ಇದು ಕೇವಲ ಬಾಹ್ಯಾಡಂಬರ ಎಂದೆನಿಸಬಹುದಾದರೂ ಈ ಸಲಹೆಯನ್ನು ದಯವಿಟ್ಟು ಪರಿಶೀಲಿಸಿ.

ಸೆಪ್ಟೆಂಬರ್ 1990ರ ಸಂಚಿಕೆಯ ಉತ್ತಮ ಲೇಖನವೆಂದರೆ ಬಿ. ಎಸ್. ಚಂದ್ರಶೇಖರ ಬರೆದ 'ದಾವೆಯ ಪ್ರಕರಣಗಳ ನಿರ್ವಹಣೆ.' ಓದಿದ್ದೆಲ್ಲವೂ ಸ್ಪಷ್ಟವಾಗಿ ಒಮ್ಮೆಗೇ ತಲೆಗೆ ಹಿಡಿಯಿತು, ಮನನವಾಯಿತು.

### ಸಂಪಾದಕರ ಪ್ರತಿಕ್ರಿಯೆ

* ಹೊಸ ಲೇಖಕರ ಪಡೆಯ ನಿರ್ಮಾಣ ಮಾಡುವುದು ಬ್ಯಾಂಕಿಂಗ್ ಪ್ರಪಂಚದ ಮುಖ್ಯ ಗುರಿಗಳಲ್ಲೊಂದು. ಅನೇಕ ಲೇಖಕರು ಪ್ರಕಾಶಕ್ಕೆ ಬಂದಿದ್ದಾರೆ. ಆದರೆ ನಿಯತಕಾಲಿಕವಾಗಿ ಲೇಖನಗಳನ್ನು ಸಿದ್ಧಪಡಿಸಿ ಕಳುಹಿಸುವವರು ಕಡಿಮೆ. ಎಲ್ಲ ಕ್ಷೇತ್ರಗಳಲ್ಲೂ ಇಂದು ಇದೇ ಸ್ಥಿತಿ ಇದೆ. ಸಮರ್ಥರಾದವರು ತಮ್ಮ ಆಲಸ್ಯವನ್ನು ಬಿಟ್ಟು ಲೇಖನ ಬರೆಯುವುದು ತಮ್ಮ ಕರ್ತವ್ಯ ಎಂದು ಬಗೆದು ಕಾರ್ಯೋನ್ಮುಖರಾಗಬೇಕು. ಉದಾಹರಣೆಗೆ : ನೀವೇ ಬರೆಯುತ್ತಿಲ್ಲವಲ್ಲ!

* ಲೇಖಕರಿಗೆ ಗೌರವ ಸಂಭಾವನೆ ಕಳಿಸಬೇಕೆಂಬುದು ನಮ್ಮ ಹಂಬಲ. ಪತ್ರಿಕೆ ತನ್ನ ಕಾಲಮೇಲೆ ತಾನೇ ನಿಲ್ಲುವ ಸ್ಥಿತಿ ಇನ್ನೂ ಬಂದಿಲ್ಲ. ಆದರೆ ಚಂದಾದಾರರಲ್ಲದ ಲೇಖಕರಿಗೆ ಗೌರವ ಪ್ರತಿಯನ್ನಂತೂ ಖಂಡಿತ ಕಳುಹಿಸುತ್ತಿದ್ದೇವೆ. ಚಂದಾದಾರ ಲೇಖಕರಿಗೂ ಇನ್ನೊಂದೊಂದು ಪ್ರತಿ ಕಳಿಸುವ ವ್ಯವಸ್ಥೆ ಮಾಡಬಹುದು.

* 'ಇದುವೆ ಜೀವ—ಇದು ಜೀವನ'ದಂಥ ಅಂಕಣ ಆರಂಭಿಸುವುದು, ಪತ್ರಿಕೆಗೆ ಒಂದು ಆತ್ಮೀಯ ಮುಖ ದೊರಕಿಸಿಕೊಡುವುದು ನಮ್ಮ ಇಚ್ಛೆ. ಆದರೆ ಇಂಥ ಅನುಭವಗಳನ್ನು ಬರೆದು ಕಳುಹಿಸಲು ಯಾರೂ ಮುಂದೆ ಬಂದಿಲ್ಲ. ಬರೆದು ಕಳಿಸಿದರೆ ಸಂತೋಷದಿಂದ ಪ್ರಕಟಿಸುತ್ತೇವೆ. ●

# ಬ್ಯಾಂಕಿಂಗ್ ಕ್ಷೇತ್ರದಲ್ಲಿ ಕನ್ನಡ

**ಸಮನ್ವಯ ಸಮಿತಿ ಪ್ರತಿ ಆರು ತಿಂಗಳುಗಳಿಗೆ ಒಂದರಂತೆ ನಡಸುತ್ತ ಬರುತ್ತಿರುವ ಬ್ಯಾಂಕಿಂಗ್ ಕಮ್ಮಟಗಳ ಶತದಿನೋತ್ಸವದ ಸಂದರ್ಭದಲ್ಲಿ ಸೆಪ್ಟೆಂಬರ್ 30ರಂದು ಬೆಂಗಳೂರಿನಲ್ಲಿ ಏರ್ಪಡಿಸಿದ್ದ ವಿಚಾರಸಂಕಿರಣದಲ್ಲಿ ಮಂಡಿಸಿದ ಪ್ರಬಂಧಗಳಲ್ಲೊಂದು.**

## ಹಾ. ಗು. ಬಾಲಗೋಪಾಲ್

**ಪ್ರಧಾನ ವ್ಯವಸ್ಥಾಪಕರು**
**ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಬೆಂಗಳೂರು**

ಜನರ ನಡುವಿನ ಸಂಪರ್ಕ ಮಾಧ್ಯಮಗಳಲ್ಲಿ ಭಾಷೆ ಅತ್ಯಂತ ಮೂಲಭೂತವಾದುದು. ಯಾವುದೇ ವ್ಯವಹಾರಕ್ಷೇತ್ರದಲ್ಲಿ ಜನರ ಭಾಷೆಗೆ ಸಹಜವಾಗಿಯೇ ಆದ್ಯತೆ ನೀಡಬೇಕಾಗುತ್ತದೆ. ಜನರ ಸಂಪರ್ಕವೇ ಜೀವಾಳ ಆಗಿರುವ ಬ್ಯಾಂಕಿಂಗ್‌ನಂಥ ಕ್ಷೇತ್ರದಲ್ಲಿ ಇದು ಅತ್ಯಗತ್ಯ. ಆದ್ದರಿಂದ ಕರ್ನಾಟಕದ ಬ್ಯಾಂಕಿಂಗ್ ವಲಯದಲ್ಲಿ ಜನತೆಯ ಭಾಷೆಯಾದ ಕನ್ನಡದ ಪಾತ್ರ ಬಹಳ ಹಿರಿಯದು. ಗ್ರಾಹಕ-ಬ್ಯಾಂಕರ್ ಸಂಬಂಧ ಸುಧಾರಿಸಿ, ಉಪಯುಕ್ತ ಸೇವೆ ಸಲ್ಲಿಸಬೇಕಾದರೆ ನಿತ್ಯ ವ್ಯವಹಾರಗಳು ಗ್ರಾಹಕರ ಭಾಷೆಯಲ್ಲಿಯೇ ನಡೆಯಬೇಕು.

1969ರಲ್ಲಿ 14 ವಾಣಿಜ್ಯ ಬ್ಯಾಂಕುಗಳ ರಾಷ್ಟ್ರೀಕರಣವಾದಾಗ ದೇಶದ ಬ್ಯಾಂಕಿಂಗ್ ಕ್ಷೇತ್ರ ಶ್ರೀಸಾಮಾನ್ಯನಿಗೆ ಹತ್ತಿರವಾಯಿತು. ಬ್ಯಾಂಕುಗಳು ಶ್ರೀಮಂತರಿಗೆ ಮಾತ್ರ ಸಹಾಯಕವಾಗಿವೆ ಎಂಬ ದೃಷ್ಟಿಕೋನ ಬದಲಾಗಿ, ಎಲ್ಲ ಜನರ ಸರ್ವತೋಮುಖ ಅಭಿವೃದ್ಧಿಗೆ ಬ್ಯಾಂಕುಗಳು ದುಡಿಯುವಂತೆ ಆದುವು. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ರೂಪಿಸಿದ ವಿವಿಧ ಯೋಜನೆಗಳನ್ನು ಕಾರ್ಯಗತಗೊಳಿಸಲು ಬ್ಯಾಂಕುಗಳು ಮುಂದಾದುವು. ಆದ್ಯತಾವಲಯ ಮುಂಗಡಗಳು, ಭಿನ್ನಕ ಬಡ್ಡಿದರ, ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ, 20 ಅಂಶಗಳ ಕಾರ್ಯಕ್ರಮ, ಮೊದಲಾದ ಯೋಜನೆಗಳಿಂದಾಗಿ ಬ್ಯಾಂಕನ್ನು ಕಂಡು ಅರಿಯದ ಬಡವನೂ ಬ್ಯಾಂಕಿಗೆ ಬಂದು ಸಾಲಸೌಲಭ್ಯ ಪಡೆಯಲು ಶಕ್ತನಾದ. ಈ ಎಲ್ಲ ಯೋಜನೆಗಳು ಗ್ರಾಮೀಣ ಜನರ ಕಲ್ಯಾಣಕ್ಕಾಗಿ ಮಾಡಿದ ಪರಿಕಲ್ಪನೆಗಳು. ಅಂದಮೇಲೆ ಇವು ಪರಿಣಾಮಕಾರಿಯಾಗಿ ಜನರನ್ನು ತಲುಪಬೇಕಾದರೆ ಅವರದೇ ಆದ ಭಾಷೆಯಲ್ಲಿ ಬ್ಯಾಂಕಿಂಗ್ ವ್ಯವಹಾರ ನಡೆಸಬೇಕು. ಕನ್ನಡ ಪ್ರಾದೇಶಿಕ ಭಾಷೆಯಾದ್ದರಿಂದ ಕನ್ನಡದಲ್ಲಿ ಹೇಳಿದ ಎಲ್ಲ ಅಂಶಗಳನ್ನೂ ಗ್ರಾಹಕ ಅಥವಾ ಸಾಲಗಾರ ಸುಲಭವಾಗಿ ಅರ್ಥಮಾಡಿಕೊಳ್ಳಬಲ್ಲ ಎಂಬುದನ್ನು ನಾವು ಮನಗಾಣಬೇಕು.

ಎಲ್ಲ ರಾಷ್ಟ್ರೀಕೃತ ಮತ್ತು ಅನುಸೂಚಿತ ಬ್ಯಾಂಕುಗಳಲ್ಲಿ ಒಂದೇ ಬಡ್ಡಿದರ, ಒಂದೇ ರೀತಿಯ ಖಾತೆಗಳು, ಒಂದೇ ರೀತಿಯ ಯೋಜನೆಗಳು, ಬಹುತೇಕ ಒಂದೇ ರೀತಿಯ ಸೌಲಭ್ಯಗಳು ಇವೆ. ಇಂದಿನ ಸ್ಪರ್ಧಾತ್ಮಕ ಪರಿಸರದಲ್ಲಿ ಒಂದು ಬ್ಯಾಂಕು ತನ್ನ ಇರುವಿಕೆಯನ್ನು ಗಮನಾರ್ಹವೆನಿಸಿಕೊಳ್ಳಲು ಸಾಧನೆಯೊಂದೇ ಸಾಲದು. ಸೇವೆ ಅತ್ಯುತ್ತಮವಾಗಬೇಕು. ಉತ್ಕೃಷ್ಟತೆಯನ್ನು ಸಾಧಿಸುವ ಪ್ರಕ್ರಿಯೆಯಲ್ಲಿ ಭಾಷೆಯ ಪಾತ್ರಮಹತ್ತರವಾದುದು. ಜನರ ಭಾಷೆಯನ್ನು ಬಳಸುತ್ತ, ಬ್ಯಾಂಕಿಂಗ್‌ಅನ್ನು ಎಲ್ಲ ಜನರ ಸಮೀಪ ಕೊಂಡೊಯ್ಯುವವರೆಗೂ, ಸೇವೆಯಲ್ಲಿ ಉತ್ಕೃಷ್ಟತೆಯನ್ನು ಸಾಧಿಸುವುದು ಅಸಂಭವ. ಈ ದೃಷ್ಟಿಯಿಂದ ಕರ್ನಾಟಕದ ಬ್ಯಾಂಕುಗಳಲ್ಲಿ ಕನ್ನಡವನ್ನು ಬಳಸುವ ಆವಶ್ಯಕತೆಯನ್ನು ಮನಗಾಣಬೇಕು.

ಕೇಂದ್ರ ಸರ್ಕಾರದ ಭಾಷಾನೀತಿಯ ಅನ್ವಯ ಹಿಂದೀತರ ರಾಜ್ಯಗಳಲ್ಲಿ ಬ್ಯಾಂಕುಗಳಲ್ಲಿ ಶೇಕಡ 20ರಷ್ಟಾದರೂ ಹಿಂದಿಯ ಬಳಕೆಯಾಗಲೇಬೇಕೆಂಬ ಒತ್ತಡವನ್ನು ಹೇರಲಾಗಿದೆ. ಗ್ರಾಹಕನಿಗೆ ಅರ್ಥವಾಗದ ಭಾಷೆಯಲ್ಲಿ ಪತ್ರವ್ಯವಹಾರ ನಡೆಸುವುದು, ಧನ್ಯವಾದ ಸಮರ್ಪಿಸುವುದು, ಸಾಲ-ಸೌಲಭ್ಯದ ನಿಯಮಾವಳಿಗಳನ್ನು ಹೇಳುವುದು. ಆದರೆ ಗ್ರಾಹಕನಿಗೆ ಇದರಿಂದ ಏನೇನೂ ಪ್ರಯೋಜನವಿಲ್ಲ. ಇದರಿಂದ ಗ್ರಾಹಕನಿಗೆ ಸಿಟ್ಟಾಗಿ ಬೇರೆ ಬ್ಯಾಂಕಿಗೆ ಹೋಗುವುದನ್ನು ಅಲ್ಲಗಳೆಯುವಂತಿಲ್ಲ. ಇತ್ತೀಚೆಗೆ ಪ್ರಜಾವಾಣಿಯ 'ವಾಚಕರವಾಣಿ' ವಿಭಾಗದಲ್ಲಿ, ಮೈಸೂರು ವಿಶ್ವವಿದ್ಯಾನಿಲಯದ ಮಾಜಿ ಕುಲಪತಿಗಳಾದ ಶ್ರೀ ದೇ. ಜವರೇಗೌಡ ಅವರ ಪತ್ರ ಪ್ರಕಟವಾಗಿದೆ. ಠೇವಣಿ ನವೀಕರಿಸಲು ಬಂದ ಪ್ರತಿಷ್ಠಿತ ಗ್ರಾಹಕರೊಬ್ಬರಿಗೆ ಹಿಂದಿ ಭಾಷೆ ಮಾತ್ರ ಇರುವ ನಮೂನೆಯನ್ನು ಕೊಟ್ಟು, ಅವರಿಗೆ ಬೇರೆ ನಮೂನೆ ಕೊಡಲಾಗದೆ ಬ್ಯಾಂಕು ಅವರ ಠೇವಣಿಯನ್ನೇ ಕಳೆದುಕೊಂಡಿತು. ಗ್ರಾಹಕರೊಬ್ಬರು ಈ ರೀತಿ ನಮೂನೆಯನ್ನು ಅಸಮಾಧಾನದಿಂದ ಹರಿದೆಸೆದು ಅತೃಪ್ತರಾಗುವುದರ ಹಿಂದೆ, ಭಾಷೆಯ ಬಲವಂತ ಹೇರಿಕೆ ಸಾಧುವಲ್ಲ ಎಂಬುದನ್ನು ಮನಗಾಣಬಹುದು. ಬ್ಯಾಂಕಿನ ಬೆಳವಣಿಗೆಯ ದೃಷ್ಟಿಯಿಂದಲೂ ಇದು ತುಂಬಾ ಹಾನಿಕರ ಎಂಬುದನ್ನು ಗಮನಿಸಬೇಕು. ಆ ಪತ್ರದ ಕೊನೆಯಲ್ಲಿ ಶ್ರೀ ದೇಜಗೌ ಅವರು ಬರೆದಿರುವ, 'ಬ್ಯಾಂಕುಗಳು, ದೂರದರ್ಶನಗಳ ಮುಂದೆ ಧರಣಿ ಕೂಡಬೇಕಾದ ದಿನ ದೂರವಿಲ್ಲ' ಎಂಬ ಮಾತುಗಳು ಎಚ್ಚರಿಕೆ ನೀಡಿದಂತಾಗಿವೆ. ನಮ್ಮ ಕನ್ನಡ ನಾಡಿನಲ್ಲಿ ಕನ್ನಡವನ್ನು ಯಾವ ರೀತಿ ಕಡೆಗಣಿಸಲಾಗುತ್ತಿದೆ ಎಂಬುದು ವ್ಯಕ್ತವಾಗುತ್ತದೆ. ಅರ್ಥವಾಗದ ಭಾಷೆಯಲ್ಲಿ ನಮೂನೆಗಳನ್ನುಮುದ್ರಿಸಿದರೆ, ಯಾವುದೇಸಂವಹನ ಸಾಧ್ಯವಾಗದೆ ಬ್ಯಾಂಕುಗಳಿಗೆ ನಷ್ಟ, ಗ್ರಾಹಕರಿಗೆ ಅತೃಪ್ತಿ. ಯಾವುದೇ ಸಂಪರ್ಕಭಾಷೆ ಜನರ ಬದುಕಿನ ಜೊತೆ ಸ್ಪಂದಿಸಿ ವ್ಯಕ್ತಿಗಳನ್ನು ಪರಸ್ಪರ ಬೆಸೆಯಬಲ್ಲ ಕೊಂಡಿಯಾಗಬೇಕು.

ಬ್ಯಾಂಕು-ಬ್ಯಾಂಕುಗಳ ನಡುವೆ ನಡೆಯುವ ವ್ಯವಹಾರಗಳು ಭಾರತ ಸರ್ಕಾರದ ಆದೇಶದಂತೆ ಹಿಂದಿ ಮತ್ತು ಇಂಗ್ಲಿಷ್ ಭಾಷೆಗಳಿಗೆ ಸೀಮಿತವಾಗಿದೆ ಎನ್ನುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಆದರೆ ಬ್ಯಾಂಕು ಮತ್ತು ಗ್ರಾಹಕನ ನಡುವೆಯ ಸಂಬಂಧ, ತಾಯಿ-ಮಗು ನಡುವಿನ ಸಂಬಂಧದಂತೆ. ಅದು ಪ್ರಾದೇಶಿಕ ಭಾಷೆಯಲ್ಲೇ ಆದರೆ ಅರ್ಥಪೂರ್ಣ. ಗ್ರಾಹಕನ ಪತ್ರಗಳು, ದೂರುಗಳು ಪ್ರಾದೇಶಿಕ ಭಾಷೆಯಲ್ಲಿ ಬಂದಾಗ ಅದೇ ಭಾಷೆಯಲ್ಲೇ ಅವನಿಗೆ ಉತ್ತರ ಕಳಿಸುವ ಪರಿಪಾಠ ಈಚೆಗಷ್ಟೇ ಬೆಳೆಯುತ್ತಿದೆ.

### ಇಂದಿನ ಸ್ಥಿತಿ

1982ರಲ್ಲಿ ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘದ ದಶಮಾನೋತ್ಸವ ಸಂದರ್ಭದಲ್ಲಿ 'ಬ್ಯಾಂಕುಗಳಲ್ಲಿ ಕನ್ನಡ' ಎಂಬ ವಿಷಯದ ಬಗ್ಗೆ ಮಾತನಾಡುತ್ತ, ಪ್ರಾ. ಎಚ್ಚೆಸ್ಕೆ ಅವರು ಹೇಳಿದ ಮಾತುಗಳನ್ನು ಇಲ್ಲಿ ಸ್ಮರಿಸಬಹುದಾಗಿದೆ:

> 'ಕರ್ನಾಟಕದ ಅಂಗಡಿಗಳಲ್ಲಿ, ಪೇಟೆಗಳಲ್ಲಿ, ಕೋರ್ಟ್-ಕಛೇರಿಗಳಲ್ಲಿ, ಅಂಚೆಮನೆ, ಬ್ಯಾಂಕುಗಳಲ್ಲಿ, ಕಾರ್ಖಾನೆಗಳಲ್ಲಿ, ಒಟ್ಟಿನಲ್ಲಿ ವ್ಯವಹಾರದ ಎಲ್ಲ ಕ್ಷೇತ್ರಗಳಲ್ಲಿ, ಕನ್ನಡ ವಿಜೃಂಭಿಸಬೇಕಾದ್ದು ಸಹಜಧರ್ಮ. ಹಾಗಿಲ್ಲವಿದ್ದರೆ ನಮ್ಮ ಜನಜೀವನವೇ ಊನಗೊಂಡಿದೆಯೆಂದು ಅರ್ಥ. ಈ ನಾನಾ ಕ್ಷೇತ್ರಗಳಲ್ಲಿ ಕನ್ನಡ ಆಳತಕ್ಕದ್ದು ಎಂದು ವಾದಿಸಬೇಕಾದ್ದು ಹಾಸ್ಯಾಸ್ಪದ.'

ಈಗ ಎಂಟು ವರ್ಷಗಳ ಅನಂತರವೂ ವಿಚಾರ ಸಂಕಿರಣವೊಂದರಲ್ಲಿ ಪುನಃ ಕನ್ನಡ ಬಳಕೆಯ ವಿಷಯ ಚರ್ಚೆಯಾಗುತ್ತಿರುವುದು ವಿಷಾದನೀಯ.

1985ರಲ್ಲಿ ನಡೆದ ವಿಶ್ವಕನ್ನಡ ಸಮ್ಮೇಳನದಲ್ಲಿ ಬ್ಯಾಂಕಿಂಗ್ ಕುರಿತ ವಿಚಾರ ಸಂಕಿರಣವೊಂದು ವ್ಯವಸ್ಥೆಯಾಗಿತ್ತು. ಕರ್ನಾಟಕ ರಾಜ್ಯದ ಬ್ಯಾಂಕುಗಳಲ್ಲಿ ತ್ರಿಭಾಷಾ ಸೂತ್ರದ ಅನುಸಾರ ಕನ್ನಡ ಭಾಷೆಯ ಬಳಕೆ ಹೆಚ್ಚುಹೆಚ್ಚಾಗಿ ಸಾಧ್ಯವಾಗುವಂತೆ ಮಾಡಲು ನಾನು ಸಹ ನನ್ನ ಕೆಲವು ಸಲಹೆಗಳನ್ನು

ನೀಡಿದ್ದೆ. ಐದು ವರ್ಷಗಳ ಬಳಿಕ ಇಂದೂ ಸಹ ಅದೇ ಸಲಹೆಗಳನ್ನು ಅದೇ ಕ್ರಮದಲ್ಲಿ ನಿಮ್ಮ ಮುಂದೆ ಇಡುತ್ತಿದ್ದೇನೆ ಎಂದರೆ ಕಳೆದ ಐದು ವರ್ಷಗಳಲ್ಲಿ ಬ್ಯಾಂಕಿಂಗ್‌ನಲ್ಲಿ ಕನ್ನಡ ಎಷ್ಟು ಮಾತ್ರ ಬಂದಿದೆ ಎಂದು ನೀವು ಊಹಿಸಬಹುದು. ಏನೇ ಆಗಲಿ, ಇವು ಶಾಶ್ವತ ಸಲಹೆಗಳಾಗೇ ಉಳಿಯದಿದ್ದರೆ ಸಾಕು.

1. ಸಾರ್ವಜನಿಕ ಸಂಪರ್ಕ ಮತ್ತು ಗ್ರಾಹಕ ಉಪಯೋಗಿಸುವ ಎಲ್ಲ ಲೇಖನ ಸಾಮಗ್ರಿಗಳಲ್ಲಿ ಕನ್ನಡ ಭಾಷೆಯ ಬಳಕೆ,
2. ರಾಜ್ಯದ ಎಲ್ಲ ಆಡಳಿತಕಛೇರಿಗಳೊಂದಿಗೆ ಕನ್ನಡದಲ್ಲಿ ಪತ್ರವ್ಯವಹಾರ ಮಾಡುವ ಪ್ರಯತ್ನ,
3. ಸಾರ್ವಜನಿಕ ಸಂಪರ್ಕದಲ್ಲಿ ಬರುವ ಎಲ್ಲ ರಬ್ಬರ್ ಮೊಹರುಗಳಲ್ಲಿ ಕನ್ನಡ ಬಳಕೆ,
4. ಬ್ಯಾಂಕಿನ ಸಿಬ್ಬಂದಿ ವರ್ಗದ ಎಲ್ಲ ಸದಸ್ಯರಿಗೂ ಕನ್ನಡ ಭಾಷೆಯ ಬಳಕೆ ಮತ್ತು ಪತ್ರವ್ಯವಹಾರದ ಬಗ್ಗೆ ಬ್ಯಾಂಕಿನ ಸಿಬ್ಬಂದಿ ತರಬೇತಿ ಕಾರ್ಯಕ್ರಮಗಳು,
5. ಬ್ಯಾಂಕಿನ ಶಾಖೆಗಳಿಗೆ ಕನ್ನಡ ಬೆರಳಚ್ಚುಗಾರರ, ಬೆರಳಚ್ಚು ಯಂತ್ರಗಳ ಸೌಲಭ್ಯ,
6. ಸಂದರ್ಭ ಸಾಹಿತ್ಯ ಪೂರೈಕೆ.

ಗ್ರಾಹಕರು ಬಳಸುವ ದಾಖಲೆಪತ್ರಗಳು, ನಮೂನೆಗಳು, ಇತ್ಯಾದಿಗಳನ್ನು ಕನ್ನಡದಲ್ಲಿ ಭಾಷಾಂತರ ಮಾಡಿ, ಗ್ರಾಹಕರಿಗೆ ಒದಗಿಸಬೇಕೆಂಬ ನನ್ನ ಏಳನೇ ಸಲಹೆ ಹಾಗೂ ಇತರ ಕೆಲವು ಸಲಹೆಗಳು ಮೈಸೂರು ಬ್ಯಾಂಕಿನಲ್ಲಂತೂ ಈಗಾಗಲೇ ಕಾರ್ಯಗತ ಆಗಿವೆ ಎನ್ನುವುದು ಸಂತೋಷದ ವಿಷಯ.

### ಆಗಿರುವ ಕೆಲಸ

ಬ್ಯಾಂಕಿನಲ್ಲಿ ಕನ್ನಡ ಬಳಕೆಯ ವಿಷಯವಾಗಿ ಮಾತನಾಡುವಾಗ, ಸಮನ್ವಯಸಮಿತಿ, ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು ಮತ್ತು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಇವರ ಸಂಘಟನೆಯಲ್ಲಿ ನಡೆಯುತ್ತಿರುವ ಬ್ಯಾಂಕಿಂಗ್ ಕಮ್ಮಟಗಳ ಪ್ರಸ್ತಾಪ ಮಾಡದೇ ಹೋದರೆ ತಪ್ಪಾದೀತು.

ವರ್ಷಕ್ಕೆ ಎರಡು ಬಾರಿಯಂತೆ ಪ್ರಾ. ಎಚ್ಚೆಸ್ಕೆ ಅವರ ನೇತೃತ್ವದಲ್ಲಿ ನಡೆಯುತ್ತಿರುವ 'ಬ್ಯಾಂಕಿಂಗ್ ಕಮ್ಮಟ'ಗಳು ಬ್ಯಾಂಕಿನಲ್ಲಿ ಕನ್ನಡ ಬಳಕೆಗೆ ತುಂಬಾ ಸಹಕಾರಿಯಾಗಿವೆ. ಇವರು ಕನ್ನಡದಲ್ಲಿ ಸಿದ್ಧಪಡಿಸಿರುವ ಅನೇಕ ನಮೂನೆ ಪತ್ರಗಳು, ಗ್ರಾಹಕರು ಬಳಸುವ ಎಲ್ಲ ಲೇಖನ ಸಾಮಗ್ರಿಗಳು, ದಾಖಲೆ ಪತ್ರಗಳು, ಇವುಗಳ ಸಹಾಯದಿಂದ ಎಲ್ಲ ಬ್ಯಾಂಕುಗಳೂ ಈ ಪತ್ರಗಳನ್ನೆಲ್ಲ ಹಿಂದಿ ಮತ್ತು ಇಂಗ್ಲಿಷ್ ಜೊತೆಗೆ ಕನ್ನಡದಲ್ಲಿ ಮುದ್ರಿಸಿ ಗ್ರಾಹಕರಿಗೆ ಒದಗಿಸಿದರೆ, ಗ್ರಾಹಕರ ಮೆಚ್ಚುಗೆಗೆ ಪಾತ್ರವಾಗುವುದರಲ್ಲಿ ಸಂಶಯವಿಲ್ಲ. 1985ರಲ್ಲಿ ಪ್ರಕಟವಾದ ಬ್ಯಾಂಕಿಂಗ್ ನಿಘಂಟು ಹಾಗೂ 1989ರಲ್ಲಿ ಪ್ರಕಟವಾದ 'ಬ್ಯಾಂಕಿಂಗ್ ಕೈಪಿಡಿ' ಈ ಹಾದಿಯಲ್ಲಿ ಒಂದು ಮೈಲಿಗಲ್ಲು. ಇವೆರಡೂ ಪುಸ್ತಕಗಳು ಬ್ಯಾಂಕಿಂಗ್ ವ್ಯವಹಾರದಲ್ಲಿ ಕನ್ನಡವನ್ನು ಬಳಸುವವರಿಗೆ ಮಾರ್ಗದರ್ಶಿಯಾಗಿವೆ.

ಬ್ಯಾಂಕಿಂಗ್ ವ್ಯವಹಾರವನ್ನು ಕನ್ನಡದಲ್ಲಿ ನಡೆಸಲಾಗುವುದಿಲ್ಲ. ಬ್ಯಾಂಕಿಂಗ್ ವ್ಯವಹಾರದ ಇಂಗ್ಲಿಷ್ ಪದಗಳಿಗೆ ಸಮಾನಾಂತರ ಕನ್ನಡ ಪದಗಳು ಸಿಗುವುದಿಲ್ಲ ಎಂದೆಲ್ಲಾ ವಾದಿಸುವವರಿಗೆ ಈ ಪುಸ್ತಕಗಳು ಮತ್ತು ಕಮ್ಮಟದವರು ಮಾಡಿರುವ ಅನೇಕ ಭಾಷಾಂತರಗಳು ಉತ್ತರವಾಗಬಲ್ಲವು.

ಸಮನ್ವಯ ಸಮಿತಿಯ ಸಹಾಯದಿಂದ ಪ್ರಾ. ಎಚ್ಚೆಸ್ಕೆಯವರ ಮಾರ್ಗದರ್ಶನದಲ್ಲಿ ಮೈಸೂರು ಬ್ಯಾಂಕ್ ಒಂದು ಬೃಹತ್ ಯೋಜನೆಯನ್ನು ಮಾಡಿ ಮುಗಿಸಿದೆ. ಅದು ಯಾವುದೆಂದರೆ, 'ಎಸ್.ಬಿ.ಎಂ. ಮಾನ್ಯುಯಲ್'ಅನ್ನು ಸಂಪೂರ್ಣವಾಗಿ ಕನ್ನಡಕ್ಕೆ ಅನುವಾದಿಸಿರುವುದು. ಈ ಸಲದ ರಾಜ್ಯೋತ್ಸವ ಸಮಾರಂಭದ ವೇಳೆಗೆ ಈ ಸಣ್ಣ ವ್ಯವಹಾರ ಕೈಪಿಡಿಯನ್ನು ಪ್ರಕಟಿಸಿ, ಬಿಡುಗಡೆ ಮಾಡಬೇಕೆಂಬ ಉದ್ದೇಶವೂ ನಮ್ಮ ಬ್ಯಾಂಕಿಗಿದೆ. ಕಳೆದ ಕೆಲವು ವರ್ಷಗಳಲ್ಲಿ ನಮ್ಮ ಬ್ಯಾಂಕು ಅನೇಕ ನಮೂನೆಗಳನ್ನು ಕನ್ನಡೀಕರಿಸಿ, ಬಳಕೆಗೆ ತಂದಿದೆ. ಸಾಲಕ್ಕಾಗಿ ಅರ್ಜಿ ಹಾಕುವಾಗಿನ ಅರ್ಜಿ ಪತ್ರದಿಂದ, ಸಾಲ ಮಂಜೂರಾತಿ ಪತ್ರದವರೆಗೆ ಎಲ್ಲವೂ ಕನ್ನಡದಲ್ಲೇ ಇದ್ದಾಗ, ಸಾಲಗಾರನಿಗೆ ತನ್ನ ವ್ಯವಹಾರದ ಬಗ್ಗೆ ಅರಿವು ಇರುತ್ತದೆ. ಇದರೊಂದಿಗೆ ತನ್ನ ಜವಾಬ್ದಾರಿಯ ಅರಿವೂ ಮೂಡುತ್ತದೆ.

### ಆಗಬೇಕಾದ್ದು

ಈ ಕ್ಷೇತ್ರದಲ್ಲಿ ನಾವು ಇನ್ನೂ ಮಾಡಬೇಕಾಗಿರುವ ಪ್ರಯತ್ನಗಳ ಬಗೆಗೆ ಗಮನ ಹರಿಸೋಣ.

ಕನ್ನಡ ಬಳಸಿದರೆ ಸಿಬ್ಬಂದಿಯ ನಿಯಂತ್ರಣ ಕಷ್ಟಕರವಾಗುತ್ತದೆ ಎಂಬ ಮಾತಿದೆ. ಬೇರೆ ಬೇರೆ ರಾಜ್ಯಗಳಿಗೆ ಹೋದ ಸಿಬ್ಬಂದಿ, ಅಲ್ಲಿಯ ಭಾಷೆ ಕಲಿಯುವುದನ್ನು ಗಮನಿಸಬಹುದು. ಅದೇ ರೀತಿ ಕನ್ನಡ ರಾಜ್ಯಕ್ಕೆ ಬಂದವರು ಕನ್ನಡ ಕಲಿಯಬೇಕಾದುದು ಅಗತ್ಯ. ಕನ್ನಡದ ಬಳಕೆ ವ್ಯಾಪಕವಾಗಿ ಆಗಬೇಕಾದರೆ, ಬ್ಯಾಂಕಿನ ವ್ಯವಹಾರಗಳೆಲ್ಲ ಕನ್ನಡದಲ್ಲಿ ಇರಬೇಕು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಬ್ಯಾಂಕುಗಳ ಕಡೆ ಗಮನ ಹರಿಸಿ, ಆಯಾ ರಾಜ್ಯಗಳಲ್ಲಿ ಪ್ರಾದೇಶಿಕ ಭಾಷೆಗಳು ವ್ಯವಹಾರ ಭಾಷೆಗಳಾಗಿ ಇರುವಂತೆ ನೋಡಿಕೊಳ್ಳಬೇಕು. ಅದರಲ್ಲೂ ಸಾಲಗಾರರ ಮುಖ್ಯ ದಾಖಲೆ ಪತ್ರಗಳೆಲ್ಲವೂ, ಆಯಾ ಪ್ರಾದೇಶಿಕ ಭಾಷೆಯಲ್ಲೇ ಇರಬೇಕೆಂಬ ನಿರ್ಬಂಧವನ್ನು ಹೇರಬೇಕು.

ಹಿಂದಿ ಭಾಷೆಗೆ ಯಾವ ರೀತಿ ಉತ್ತೇಜನ ನೀಡಲಾಗುತ್ತಿದೆಯೋ, ಅದೇ ರೀತಿ ಕನ್ನಡ ಭಾಷೆಗೂ ಪ್ರೋತ್ಸಾಹ ನೀಡಬೇಕು. ಬ್ಯಾಂಕುಗಳಲ್ಲಿ ಕನ್ನಡ ಭಾಷೆಯ ಉಪಯೋಗ ಆಗುತ್ತಿದೆಯೋ ಇಲ್ಲವೋ ಎಂಬುದನ್ನು ಆಗಾಗ ಪರಿಶೀಲಿಸಬೇಕು.

ಕನ್ನಡ ಕ್ರಿಯಾ ಸಮಿತಿಯವರು, ಕಾವಲು ಸಮಿತಿಯವರು, ಕನ್ನಡಾಭಿಮಾನಿಗಳು ಮುಂತಾದವರು ಗಮನ ಹರಿಸಿದರೆ, ಕನ್ನಡ ಭಾಷೆಗೆ ಸಲ್ಲಬೇಕಾದ ಸ್ಥಾನವನ್ನು ಬ್ಯಾಂಕುಗಳಲ್ಲಿ ದೊರಕಿಸಿಕೊಡಬಹುದು.

ಕನ್ನಡೇತರರಿಗೆ ಕನ್ನಡ ಕಲಿಸಲು ಯೋಜನೆಗಳನ್ನು ಹಾಕಿಕೊಳ್ಳಬೇಕು. ಕನ್ನಡ ಕಲಿತು, ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ ಉತ್ತೇಜಕ ಬಹುಮಾನಗಳನ್ನು ನೀಡಬೇಕು ಕನ್ನಡ ಬಳಕೆಯಲ್ಲಿ ಅತಿ ಹೆಚ್ಚಿನ ಯಶಸ್ಸನ್ನು ಸಾಧಿಸಿದ ಬ್ಯಾಂಕಿಗೆ ಪಾರಿತೋಷಕ ನೀಡಬೇಕು. ತ್ರಿಭಾಷಾ ಸೂತ್ರವಿದ್ದರೂ ಸಹ, ಅದನ್ನು ಕಾರ್ಯರೂಪಕ್ಕೆ ತರಲು ಪ್ರಾದೇಶಿಕ ಭಾಷೆಯನ್ನು ಹೆಚ್ಚು ಬಳಸುವುದರ ಬಗ್ಗೆ ಗಮನ ಹರಿಸಬೇಕು. ಜನತೆಗೆ ಅರ್ಥವಾಗುವ ಭಾಷೆಯಲ್ಲಿ ವ್ಯವಹರಿಸಿದರೆ ಮಾತ್ರ ಜನರ ಹಾಗೂ ಬ್ಯಾಂಕಿನ, ಅಷ್ಟೇ ಮುಖ್ಯವಾಗಿ ಭಾಷೆಯ ಏಳಿಗೆ ಸಾಧ್ಯ.

### ಅನುಕರಣೀಯ

1988ರ ಜೂನ್‌ನಲ್ಲಿ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಪ್ರಧಾನ ಕಛೇರಿಯಲ್ಲಿ 'ಕನ್ನಡ ವಿಭಾಗ' ಸ್ಥಾಪನೆಯಾಗಿದೆ ಬ್ಯಾಂಕಿಂಗ್ ಇತಿಹಾಸದಲ್ಲೇ ಇದೊಂದು ಮೈಲಿಗಲ್ಲು. ಅನುವಾದ, ಪರಿಷ್ಕರಣೆಗಳು ಈ ವಿಭಾಗದ ಮುಖ್ಯ ಕೆಲಸಗಳು. ಇಂತಹ ವಿಭಾಗಗಳು ಎಲ್ಲ ಬ್ಯಾಂಕುಗಳಲ್ಲೂ ಸ್ಥಾಪಿತವಾಗಬೇಕು.

ಮೈಸೂರು ಬ್ಯಾಂಕು 1970ನೇ ಇಸವಿಯಿಂದಲೇ, ಅಂದರೆ ಎರಡು ದಶಕಗಳಿಂದಲೂ, ತನ್ನ ಬ್ಯಾಂಕಿನ ವಾರ್ಷಿಕ ವರದಿ, ಲಾಭ ನಷ್ಟ ತಃಖ್ತೆ ಹಾಗೂ ಲೆಕ್ಕ ಪರಿಶೋಧಕರ ವರದಿಯನ್ನು ಕನ್ನಡದಲ್ಲೂ ಹೊರತಂದಿದೆ ಎಂದು ಹೇಳಲು ಹೆಮ್ಮೆ ಎನಿಸುತ್ತದೆ. ನಾವು ಪ್ರಾಯೋಜಿಸಿರುವ ಗ್ರಾಮೀಣ ಬ್ಯಾಂಕುಗಳ ವಾರ್ಷಿಕ ವರದಿ, ಲಾಭ ನಷ್ಟ ತಃಖ್ತೆ ಹಾಗೂ ಲೆಕ್ಕ ಪರಿಶೋಧಕರ ವರದಿಯನ್ನು ಕನ್ನಡದಲ್ಲಿ ಹೊರತಂದಿದ್ದೇವೆ. ಮೈಸೂರು ಬ್ಯಾಂಕಿನ ಈ ಹೆಜ್ಜೆ ಅನುಕರಣೀಯ ಎಂದು ಹೇಳಬಯಸುತ್ತೇನೆ. ●

---

ಇಂದಿನ ಪರಿಸ್ಥಿತಿಯ ದುರಂತವೆಂದರೆ, ಕನ್ನಡ ಕಣ್ಣು ಕುಕ್ಕುವಷ್ಟು ಬೆಳಕಿಗೆ ಮೈಯೊಡ್ಡಿದಂತಾಗಿದೆ. ಈ ಪ್ರಬಲವಾದ ಬೆಳಕಿನಲ್ಲಿ ಕನ್ನಡದ ಕಾರಣಕ್ಕಾಗಿ ಕೈಯೆತ್ತುವವರಂತೂ ಸರಿ. ಕನ್ನಡವನ್ನು ತಮ್ಮ ತಮ್ಮ ಕಾರಣಗಳಿಗಾಗಿ ವಿರೋಧಿಸುವವರೂ ಮುಖಂಡರಾಗುತ್ತಾರೆ. ಸರಳವಾದ, ಬಹುಜನ ಹಿತದ ವಿಷಯವನ್ನು ಜಟಿಲಗೊಳಿಸುತ್ತಾರೆ. ಇದನ್ನು ರಾಜಕೀಯ ದೊಂಬರಾಟದ ಮಟ್ಟಕ್ಕೆ ಇಳಿಯಗೊಡದೆ ದಕ್ಷಿಣ ರಾಜ್ಯಗಳ ಮುಖ್ಯಮಂತ್ರಿಗಳು ಒಂದೆಡೆ ಸೇರಿ, ಅಧಿಕೃತ ಭಾಷಾ ಕಡ್ಡಾಯದ ರೂಪರೇಷೆಗಳ ಮತ್ತು ಇತರ ಸಂಬಂಧಿಕ ವಿಷಯಗಳ ಪರಿಶೀಲನೆ ನಡೆಸುವ ಕಾಲವೀಗ ಬಂದಿದೆ.

— ಜಯತೀರ್ಥ ರಾಜಪುರೋಹಿತ್

---

# ಕಮ್ಮಟೋತ್ಸವ-ಒಂದು ವರದಿ

ಚಂದ್ರು

ಏಪ್ರಿಲ್ 1982ರಲ್ಲಿ ಆರಂಭವಾದ ಕಮ್ಮಟ ಚಳವಳಿ ಬಲಗೊಳ್ಳುತ್ತ ಈವರೆಗೆ ಸಮನ್ವಯ ಸಮಿತಿಯ ಆಶ್ರಯದಲ್ಲಿ ಹದಿನೆಂಟು ಬ್ಯಾಂಕಿಂಗ್ ಕಮ್ಮಟಗಳು ನಡೆದಿವೆ. ಪ್ರತಿ ಕಮ್ಮಟವೂ 5-6 ದಿನಗಳ ಅವಧಿಯದಾಗಿದ್ದು ಕೋಲಾರದಲ್ಲಿ 2-5-90ರಂದು ಸಮಾರೋಪಗೊಂಡಾಗ ಕಮ್ಮಟ ನಡೆದ ದಿನಗಳ ಸಂಖ್ಯೆ 99 ತಲಪಿತ್ತು. ಕಮ್ಮಟದ ನೂರನೇ ದಿನವನ್ನು ಹಬ್ಬವನ್ನಾಗಿ ಆಚರಿಸಬೇಕೆಂಬ ಆಲೋಚನೆ ಪುಟಗೊಂಡು 1990ರ ಸೆಪ್ಟೆಂಬರ್ 28ರಿಂದ 30ರ ವರೆಗೆ ಬೆಂಗಳೂರಿನಲ್ಲಿ ಒಂದು ಕಮ್ಮಟವನ್ನು ನಡೆಸಬೇಕೆಂದೂ, ಅದರ ಮೊದಲ ದಿನವನ್ನು ನೂರನೇ ದಿನದ ಹಬ್ಬವಾಗಿ ಆಚರಿಸಬೇಕೆಂದೂ ತೀರ್ಮಾನಿಸಲಾಯಿತು. ಅದರ ಫಲವೇ 'ಕಮ್ಮಟೋತ್ಸವ.'

28ರಂದು ಮಹಾನವಮಿ. ಅಂದು ಬೆಳಗ್ಗೆ 10 ಗಂಟೆಗೆ ಪಂಪ ಮಹಾಕವಿ ರಸ್ತೆಯಲ್ಲಿರುವ ಭಾರತೀಯ ಸ್ಟೇಟ್ ಬ್ಯಾಂಕಿನ ಸಿಬ್ಬಂದಿ ತರಬೇತಿ ಕೇಂದ್ರದಲ್ಲಿ 18ನೇ ಬ್ಯಾಂಕಿಂಗ್ ಕಮ್ಮಟದ ಕಲಾಪ ಆರಂಭವಾಯಿತು. ಸಂಜೆ 4 ಗಂಟೆಗೆ ಅದೇ ಸ್ಥಳದಲ್ಲಿ 'ನೂರನೇ ದಿನದ ಹಬ್ಬ' ಏರ್ಪಡಿಸಲಾಗಿತ್ತು. ಬ್ಯಾಂಕಿನ ಪ್ರಧಾನ ವ್ಯವಸ್ಥಾಪಕರಾದ ಶ್ರೀ ಪಿ. ವಿ. ಮಯ್ಯ ಅವರ ಅಧ್ಯಕ್ಷತೆಯಲ್ಲಿ ನಡೆದ ಈ ಸಂಭ್ರಮದ ಸಮಾರಂಭದಲ್ಲಿ ಈ ಎಲ್ಲ ಕಮ್ಮಟಗಳ ನಿರ್ದೇಶಕರೂ ಸಮನ್ವಯ ಸಮಿತಿಯ ಚಟುವಟಿಕೆಗಳ ಪ್ರೇರಕ ಶಕ್ತಿಯೂ ಆದ ಪ್ರಾ॥ ಎಚ್ಚೆಸ್ಕೆಯವರನ್ನು ಸನ್ಮಾನಿಸಲಾಯಿತು. ಸನ್ಮಾನಕ್ಕೆ ಪೂರ್ವಭಾವಿಯಾಗಿ ಹಾಸ್ಯ ಬರಹಗಾರ ಶ್ರೀ ಎಂ. ಎಸ್. ನರಸಿಂಹಮೂರ್ತಿಯವರು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಮಾತನಾಡಿ ಎಚ್ಚೆಸ್ಕೆಯವರ ವ್ಯಕ್ತಿತ್ವದ ರಸಚಿತ್ರವೊಂದನ್ನು ನೀಡಿದರು. ಸಮಿತಿಯ ಚಟುವಟಿಕೆಗಳ ಜೀವಸ್ವರೂಪವಾಗಿದ್ದು ಕಮ್ಮಟಿಗರಿಗೆ ದಾರಿದೀಪದಂತಿರುವ ಪ್ರಾಚಾರ್ಯರಿಗೆ ಭಾರತೀಯ ಸ್ಟೇಟ್ ಬ್ಯಾಂಕಿನ ಶ್ರೀ ಬಿ.ಎಸ್. ಚಂದ್ರಶೇಖರ್ ಗುರುವಂದನೆ ಸಲ್ಲಿಸಿದರು. ಮುಖ್ಯ ಅತಿಥಿಯಾಗಿ ಆಗಮಿಸಿದ ಕನ್ನಡ ಅಭಿವೃದ್ಧಿ ಮಂಡಳಿಯ ಅಧ್ಯಕ್ಷ ಶ್ರೀ ಕೆ. ಎಚ್. ಶ್ರೀನಿವಾಸ್ ಅವರು ಪ್ರಾ॥ ಎಚ್ಚೆಸ್ಕೆಯವರನ್ನೂ ಸಮಿತಿಯ ಸೃಜನಾತ್ಮಕ ಚಟುವಟಿಕೆಗಳನ್ನೂ ಮುಕ್ತಕಂಠದಿಂದ ಶ್ಲಾಘಿಸಿ ತಾವು ಮಂಡಳಿಯ ಅಧ್ಯಕ್ಷತೆ ವಹಿಸಿಕೊಂಡ ಮೇಲೆ ಮೊದಲನೆಯ ಕೆಲಸವಾಗಿ ಇಂಥ ಅರ್ಥಪೂರ್ಣ ಸಮಾರಂಭದಲ್ಲಿ ಭಾಗವಹಿಸಿದ್ದು ತಮಗೆ ತೃಪ್ತಿ ತಂದಿದೆಯೆಂದರು.

ಹಬ್ಬದ ನೆನಪಿಗಾಗಿ ಪ್ರಕಟಿಸಲಾದ 'ಬ್ಯಾಂಕಿಂಗ್ ಕಮ್ಮಟ-100' ಎಂಬ ಕಿರುಹೊತ್ತಗೆಯನ್ನು ಸಣ್ಣ ಉಳಿತಾಯ ನಿರ್ದೇಶನಾಲಯದ ನಿರ್ದೇಶಕರಾದ ಶ್ರೀ ಐ. ಎಂ. ವಿಠಲಮೂರ್ತಿಯವರು ಬಿಡುಗಡೆ ಮಾಡಿದರು.

## ವೈಶಿಷ್ಟ್ಯಪೂರ್ಣ ವಿಚಾರಸಂಕಿರಣಗಳು

'ಬ್ಯಾಂಕುಗಳು ಇಂದು ಏಕೆ ಪರಿಣಾಮಕಾರಿಯಾಗಿಲ್ಲ' ಎಂಬ ವಿಷಯ ಕುರಿತು 29-9-1990ರಂದು ವಿಚಾರ ಸಂಕಿರಣವೊಂದನ್ನು ಏರ್ಪಡಿಸಲಾಗಿದ್ದು, ಖ್ಯಾತ ಅರ್ಥಶಾಸ್ತ್ರಜ್ಞರಾದ ಡಾ॥ ಪಿ. ಆರ್. ಬ್ರಹ್ಮಾನಂದ ಮತ್ತು ಡಾ. ಕೆ.ಎಸ್. ಕೃಷ್ಣಸ್ವಾಮಿ ಇವರು 'ಬ್ಯಾಂಕುಗಳ ಲಾಭಪ್ರದತೆ' ಹಾಗೂ 'ಸಂರಚನೆಯ ಬದಲಾವಣೆ'ಯನ್ನು ಕುರಿತ ತಮ್ಮ ಮೌಲಿಕ ಚಿಂತನೆಗಳನ್ನು ಮಂಡಿಸಿದರು. ಸಂಕಿರಣದ ಇನ್ನೊಬ್ಬ ಭಾಷಣಕಾರರಾಗಿ ಆಗಮಿಸಿದ ಅಖಿಲ ಬ್ಯಾಂಕ್ ಅಧಿಕಾರಿಗಳ ಒಕ್ಕೂಟದ ಪ್ರಧಾನ ಕಾರ್ಯದರ್ಶಿ ಶ್ರೀ ಎಸ್. ಶಾಂತರಾಜು ಅವರು 'ಉತ್ತರದಾಯಿತ್ವ' ಕುರಿತು ಮಾತನಾಡುತ್ತ ಬ್ಯಾಂಕ್ ವರಿಷ್ಠರೂ ಒಳಗೊಂಡಂತೆ ಅಧಿಕಾರಿಗಳು ತೂಗುಕತ್ತಿಯ ಕೆಳಗೆ ಕೆಲಸ ಮಾಡುವಂತಾಗಿರುವ ಇಂದಿನ ಸ್ಥಿತಿಯನ್ನು ವಿಶ್ಲೇಷಿಸಿದರು. ಶ್ರೋತೃಗಳ ಕೆದಕುವ ಪ್ರಶ್ನೆಗಳಿಗೆ ಭಾಷಣಕಾರರು ಯುಕ್ತ ಉತ್ತರಗಳನ್ನು ನೀಡಿದರು.

ವಿಚಾರಸಂಕಿರಣದ ಅಧ್ಯಕ್ಷ ಪೀಠದಿಂದ ಶ್ರೀ ಪಿ. ವಿ. ಮಯ್ಯ ಅವರು ಮಾತನಾಡುತ್ತ ಈ ಮೂರೂ ವಿಷಯಗಳು ದೊಡ್ಡವೆಂದೂ, ಒಂದೊಂದಕ್ಕೂ ಒಂದೊಂದು ವಿಚಾರಸಂಕಿರಣ ಬೇಕೆಂದೂ ಅಭಿಪ್ರಾಯಪಟ್ಟು 'ಉತ್ತರದಾಯಿತ್ವ'ದ ಒಂದು ಸ್ಥೂಲ ವ್ಯಾಖ್ಯೆಯಾದರೂ ರೂಪುಗೊಳ್ಳಬೇಕೆಂದು ಕರೆ ನೀಡಿದರು.

ಸಮನ್ವಯ ಸಮಿತಿ ಪ್ರಕಟಿಸುತ್ತಿರುವ ಬ್ಯಾಂಕಿಂಗ್ ಪ್ರಪಂಚದ ಸಂಪಾದಕೀಯ ಲೇಖನಗಳ ಸಂಗ್ರಹವಾದ 'ಬ್ಯಾಂಕಿಂಗ್ ಹೆಜ್ಜೆ ಗುರುತುಗಳು' ಹಾಗೂ 'ಬ್ಯಾಂಕು ಮತ್ತು ಭಾಷೆ' ಎಂಬ ಕೃತಿಯನ್ನು ಇದೇ ಸಂದರ್ಭದಲ್ಲಿ ಡಾ॥ ಪಿ. ಆರ್. ಬ್ರಹ್ಮಾನಂದ ಬಿಡುಗಡೆಗೊಳಿಸಿದರು.

ಕಮ್ಮಟದ ಮೂರನೆಯ ಮತ್ತು ಕೊನೆಯ ದಿನವಾದ 30-9-90ರಂದು 'ವ್ಯವಹಾರ ಕ್ಷೇತ್ರದಲ್ಲಿ ಕನ್ನಡ' ಕುರಿತ ಇನ್ನೊಂದು ವಿಚಾರಸಂಕಿರಣವಿತ್ತು. ವಿವಿಧ ಕ್ಷೇತ್ರಗಳಲ್ಲಿ ಕನ್ನಡದ ಸ್ಥಾನವನ್ನೂ ಕನ್ನಡ ಬಳಕೆಯ ಸಾಧ್ಯತೆ, ಸಮಸ್ಯೆ-ಪರಿಹಾರಗಳನ್ನೂ ಕುರಿತು ಆಯಾ ಕ್ಷೇತ್ರಗಳಲ್ಲಿ ಕನ್ನಡ ಬಳಕೆಯ ದೀಕ್ಷೆ ಹಿಡಿದ ತಜ್ಞರು ತಮ್ಮ ಅನುಭವಸಿದ್ಧ ವಿಚಾರಗಳನ್ನು ಸಾದರಪಡಿಸಿ ಶ್ರೋತೃಗಳ ಪ್ರಶ್ನೆ, ಸಂದೇಹಗಳಿಗೆ ಪ್ರತಿಕ್ರಿಯಿಸಿದರು. ಬ್ಯಾಂಕಿಂಗ್ ಕ್ಷೇತ್ರವನ್ನು ಮೈಸೂರು ಬ್ಯಾಂಕಿನ ಪ್ರಧಾನ ವ್ಯವಸ್ಥಾಪಕ ಶ್ರೀ ಹಾ. ಗು. ಬಾಲಗೋಪಾಲ, ಕಾನೂನು ಕ್ಷೇತ್ರವನ್ನು ಖ್ಯಾತ ನ್ಯಾಯವಾದಿ ಶ್ರೀಮತಿ ಹೇಮಲತಾ ಮಹಿಷಿ, ಬೋಧನೆಯ ಕ್ಷೇತ್ರವನ್ನು ಮೈಸೂರಿನ ಬನುಮಯ್ಯ ಕಾಲೇಜಿನ ಶ್ರೀ ಸಿಂಧುವಳ್ಳಿ ಬಾಲಸುಬ್ರಹ್ಮಣ್ಯ ಮತ್ತು ಸಮೂಹ ಮಾಧ್ಯಮ ಕ್ಷೇತ್ರವನ್ನು ಮೈಸೂರಿನ ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆಯ ಡಾ॥ ಭ. ಮಲ್ಲಿಕಾರ್ಜುನ ಇವರು ಪ್ರತಿನಿಧಿಸಿದ್ದರು. ಸಂಕಿರಣದ ಅಧ್ಯಕ್ಷತೆ ವಹಿಸಿದ್ದ ಪ್ರಾ॥ ಎಚ್ಚೆಸ್ಕೆಯವರು ಎಲ್ಲ ಕ್ಷೇತ್ರಗಳಲ್ಲೂ ಕನ್ನಡ ಬಳಸುವುದು ಒಂದು ವ್ಯಾವಹಾರಿಕ ಅಗತ್ಯವೆಂದೂ, ಭಾಷೆ ಕೇವಲ ಸಂವಹನದ ಮಾಧ್ಯಮ ಅಷ್ಟೇ ಅಲ್ಲ, ಅದು ಜನರನ್ನು ಹತ್ತಿರ ತರುವ 'ಭಾವಸೇತು' ಎಂದೂ ಬಣ್ಣಿಸಿದರು. ಬೆಂಗಳೂರಿನ ಸಹಕಾರಿ ತರಬೇತಿ ಕಾಲೇಜಿನ ಪ್ರಾಧ್ಯಾಪಕ ಶ್ರೀ ಮಲ್ಲಿಕಾರ್ಜುನ ವಗ್ಗನವರ ಅವರ 'ಕರ್ನಾಟಕದಲ್ಲಿ ಸಹಕಾರಿ ಬ್ಯಾಂಕುಗಳು' ಎಂಬ ಕೃತಿ ಎಚ್ಚೆಸ್ಕೆಯವರಿಂದ ಬಿಡುಗಡೆಗೊಂಡಿತು.

## ಪ್ರಬಂಧ ಮಂಡನೆ ಚರ್ಚೆ

ಮೊದಲನೆ ದಿನ ಬೆಳಗ್ಗೆ ಮಾತ್ರವಲ್ಲದೆ ಎರಡು ಮತ್ತು ಮೂರನೇ ದಿನಗಳಲ್ಲಿಯೂ ಮಧ್ಯಾಹ್ನ 3ರಿಂದ ಕಮ್ಮಟದಲ್ಲಿ ಪ್ರಬಂಧಗಳ ಮಂಡನೆ ನಡೆಯಿತು. ಕಾರ್ಯಕ್ರಮದಲ್ಲಿ ಭಾರತೀಯ ಸ್ಟೇಟ್ ಬ್ಯಾಂಕ್, ಮೈಸೂರು ಬ್ಯಾಂಕ್, ಕೆನರಾ ಬ್ಯಾಂಕ್, ಸಹಕಾರಿ ಬ್ಯಾಂಕುಗಳು, ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್ ಮುಂತಾದ ಬ್ಯಾಂಕುಗಳ ಪ್ರತಿನಿಧಿಗಳು, ಬೋಧಕರು, ಕಾಲೇಜು ಉಪನ್ಯಾಸಕರು ಒಳಗೊಂಡಂತೆ ಒಟ್ಟು 47 ಅಭ್ಯರ್ಥಿಗಳು ಕಮ್ಮಟದಲ್ಲಿ ಪಾಲ್ಗೊಂಡಿದ್ದರು. ಕಮ್ಮಟದಲ್ಲಿ ಈ ಮುಂದಿನ ವಿಷಯಗಳನ್ನು ಕುರಿತು ಪ್ರಬಂಧಗಳನ್ನು ಮಂಡಿಸಿ ಚರ್ಚಿಸಲಾಯಿತು :

1. ವಾಣಿಜ್ಯ ಪತ್ರಗಳು
2. ಪರಕ್ರಾಮ್ಯ ಸಂಲೇಖಗಳ ಅಧಿನಿಯಮ 1881 —ಇತ್ತೀಚಿನ ತಿದ್ದುಪಡಿಗಳು
3. ಬ್ಯಾಂಕಿಂಗ್ ಕಲಾಪಗಳಲ್ಲಿ ವಿವಿಧೀಕರಣ
4. ರೋಗಗ್ರಸ್ತ ಬ್ಯಾಂಕಿಂಗ್ ವ್ಯವಸ್ಥೆ
5. ಬಳಕೆದಾರರ ಹಿತರಕ್ಷಣಾ ಅಧಿನಿಯಮ-1986

ಇದಲ್ಲದೆ ಕೃಷಿ ಉದರಿ ಕುರಿತಂತೆ ಖುಸ್ರೋ ಸಮಿತಿಯ ವರದಿಯನ್ನು ಕುರಿತ ಒಂದು ಉಪನ್ಯಾಸವೂ ಇತ್ತು. ಕಾರ್ಯಕ್ರಮಗಳ ಒತ್ತಡದಿಂದಾಗಿ ಮೂರು ದಿನಗಳ ಈ ಕಿರುಕಮ್ಮಟದಲ್ಲಿ ಪೂರ್ವಯೋಜನೆಯಂತೆ ಭಾಷಾಂತರ ಕಾರ್ಯವನ್ನು ನಡೆಸಲು ಅವಕಾಶವಾಗಲಿಲ್ಲವಾದರೂ ನಿರ್ದೇಶಕರು ಕಮ್ಮಟಿಗರಿಗೆ ಭಾಷಾಂತರ ಕುರಿತು ಉಪಯುಕ್ತ ಮಾಹಿತಿ ನೀಡಿ ಭಾಷಾಂತರದ ಮಹತ್ವವನ್ನು ಮನವರಿಕೆ ಮಾಡಿಕೊಟ್ಟರು.

## ಸಹಯೋಗ

ಈ ಕಮ್ಮಟಕ್ಕೆ ಕರ್ನಾಟಕ ಸರಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಸಹಯೋಗ ನೀಡಿತ್ತು. ಮೈಸೂರು ಬ್ಯಾಂಕ್ ಮತ್ತು ಭಾರತೀಯ ಸ್ಟೇಟ್ ಬ್ಯಾಂಕುಗಳು ತಮ್ಮ ಸಿಬ್ಬಂದಿ ತರಬೇತಿ ಕೇಂದ್ರಗಳನ್ನು ಈ ಕಾರ್ಯಕ್ರಮಕ್ಕಾಗಿ ಸಂಪೂರ್ಣವಾಗಿ ತೆರವು ಮಾಡಿಕೊಟ್ಟಿದ್ದಲ್ಲದೆ ಪುಸ್ತಕ ಪ್ರಕಟಣೆಗಾಗಿಯೂ ನೆರವು ನೀಡಿದ್ದು ಶ್ಲಾಘನೀಯ. ಬ್ಯಾಂಕುಗಳ ಪರಿಣಾಮಕಾರಿತ್ವ ಕುರಿತ ವಿಚಾರ ಸಂಕಿರಣವನ್ನು ಭಾರತೀಯ ಸ್ಟೇಟ್ ಬ್ಯಾಂಕ್ ಪ್ರಾಯೋಜಿಸಿತ್ತು.

## ಸಮಾವೇಶ ಸಮಾರೋಪ – ಸಂಕಲ್ಪ

ಕಮ್ಮಟದ ಎರಡನೇ ದಿನ ಸಂಜೆ ಕಮ್ಮಟಿಗರ ಸಮಾವೇಶ ಏರ್ಪಡಿಸಲಾಗಿದ್ದು ಭಾಗವಹಿಸಿದ್ದವರು ಕಮ್ಮಟದ ವ್ಯವಸ್ಥೆ ಕುರಿತು ಮುಕ್ತವಾಗಿ ತಮ್ಮ ಅಭಿಪ್ರಾಯ, ಸಲಹೆಗಳನ್ನು ಮಂಡಿಸಿದರು. ಮೈಸೂರು ಬ್ಯಾಂಕಿನ ಕನ್ನಡ ಬಳಗದ ಸದಸ್ಯರು ತಾವೂ ಇಂಥ ಕಮ್ಮಟಗಳನ್ನು ನಡೆಸಲು ಆಸಕ್ತಿ ತೋರಿಸಿದ್ದು, ಇನ್ನು ಮುಂದೆ ಸಮನ್ವಯ ಸಮಿತಿ ಮತ್ತು ಕನ್ನಡ ಬಳಗದವರು ಪರ್ಯಾಯವಾಗಿ ಬ್ಯಾಂಕಿಂಗ್ ಕಮ್ಮಟಗಳನ್ನು ಏರ್ಪಡಿಸಬಹುದೆಂದು ತಾತ್ವಿಕವಾಗಿ ಒಪ್ಪಲಾಯಿತು.

ಮರುದಿನ ಕಮ್ಮಟದ ಸಮಾರೋಪ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಯಾಗಿ ಆಗಮಿಸಿದ ಪುತ್ತೂರಿನ ವಿವೇಕಾನಂದ ಕಾಲೇಜಿನ ಪ್ರಾಂಶುಪಾಲ ಪ್ರೊ. ಎಂ. ಎಸ್. ಅಪ್ಪ ಅವರು ಇಂಥ ಚಳವಳಿ ನಿರಂತರವಾಗಿ ಮುಂದುವರಿದುಕೊಂಡು ಹೋಗಬೇಕಾದುದರ ಅಗತ್ಯವನ್ನು ಒತ್ತಿ ಹೇಳಿ, ಇದು ಸಮಾರೋಪ ದಿನ ಆಗಬಾರದು, 'ಸಂಕಲ್ಪ ದಿನ'ವಾಗಬೇಕೆಂದು ಕರೆ ನೀಡಿದರು. ಕಮ್ಮಟಿಗರಲ್ಲಿ ಹಲವರು ತಮ್ಮ ಅನುಭವಗಳನ್ನು ನಿವೇದಿಸಿದರು. ಸಮನ್ವಯ ಸಮಿತಿಯ ಪದಾಧಿಕಾರಿಗಳಾದ ಶ್ರೀ ಪಾ. ರಾಜಗೋಪಾಲ ಮತ್ತು ಶ್ರೀ ಮೋ. ಕೃ. ಅನಂತಸ್ವಾಮಿ—ಇವರು ಕಮ್ಮಟೋತ್ಸವದ ಯಶಸ್ಸಿಗೆ ಸಂತೋಷ ವ್ಯಕ್ತಪಡಿಸಿ ನೆರವು ನೀಡಿದ ಎಲ್ಲರಿಗೂ ಹೃತ್ಪೂರ್ವಕ ಕೃತಜ್ಞತೆ ಸಲ್ಲಿಸಿದರು. ಆರು ದಿನಗಳ ಕಮ್ಮಟಕ್ಕೆ ಹೊಂದಿಕೊಂಡಿದ್ದ ಕಮ್ಮಟಿಗರಿಗೆ ಮೂರು ದಿನದ ಈ ಕಿರುಕಮ್ಮಟ ಪೂರ್ಣ ತೃಪ್ತಿ ನೀಡಿದಂತಿರಲಿಲ್ಲ. ಮುಖ್ಯವಾಗಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸಲು ಎಷ್ಟು ಶ್ರಮಿಸಿದರೂ ಸಾಧ್ಯವಾಗದಿದ್ದುದು ಹಲವರಿಗೆ ಒಂದು ಕೊರತೆಯೆನ್ನಿಸಿತ್ತು. ಅದನ್ನು ನೀಗಿಸಲು ಸಮಾರೋಪದ ಅಂತ್ಯದಲ್ಲಿ ಎಚ್ಚೆಸ್ಕೆಯವರ ಅಧ್ಯಕ್ಷತೆಯಲ್ಲಿ ಕವಿಗೋಷ್ಠಿಯೊಂದನ್ನು ಏರ್ಪಡಿಸಲಾಗಿತ್ತು. ಸ್ಫೂರ್ತಿಗೊಂಡ ಕಮ್ಮಟಿಗರು ಅಂದು ನಡೆಸಿದ ಕವಿಗೋಷ್ಠಿ ಸ್ಮರಣೀಯವಾಗಿತ್ತು. ಭಾರವಾದ ಹೃದಯಗಳಿಂದ ಕಮ್ಮಟಿಗರು ಪರಸ್ಪರರಿಗೆ ವಿದಾಯ ಹೇಳುತ್ತಿದ್ದಂತೆ ಸಂಭ್ರಮದ 'ಕಮ್ಮಟೋತ್ಸವ' ಸವಿನೆನಪಾಗಿ ಮಾರ್ಪಾಡಾಗತೊಡಗಿತು. ●

# ಬ್ಯಾಂಕು ಮತ್ತು ರೈತ* — ಕೌಂಟರಿನೀಚೆಯಿಂದ

"ತಮ್ಮ ಮೇಲಧಿಕಾರಿಗಳನ್ನು ಹಾಗೂ ರಾಜಕಾರಣಿಗಳನ್ನು ಮೆಚ್ಚಿಸಲು ಆದ್ಯತಾ ಕ್ಷೇತ್ರಕ್ಕೆ ಹೆಚ್ಚು ಗಮನ ಕೊಟ್ಟಂತೆ ಪ್ರದರ್ಶಿಸುವ ಹಲವು ಬ್ಯಾಂಕ್ ಅಧಿಕಾರಿಗಳು ಇದನ್ನು ತಮ್ಮ ಪ್ರಮೋಶನ್‌ಗಳಿಗಾಗಿ ಹೊರತು ರೈತಾಪಿ ಜನರ ಬಗ್ಗೆ ನೈಜ ಕಳಕಳಿಯಿಂದ ಮಾಡುತ್ತಿಲ್ಲ.

ಬ್ಯಾಂಕಿನ ಕೃಷಿ ಅಧಿಕಾರಿಯಾಗಿದ್ದು ಬೇಸತ್ತು ರಾಜೀನಾಮೆ ಕೊಟ್ಟ ಲೇಖಕರ ನಿರೀಕ್ಷಣೆ ಈ ಲೇಖನದಲ್ಲಿದೆ."

ಅಡಿಕೆ ಬೆಳೆಗಾರರ ಏಕೈಕ ಮಾಧ್ಯಮವಾದ ಅಡಿಕೆ ಪತ್ರಿಕೆಯಲ್ಲಿ ಪ್ರಕಟವಾದ ಈ ಲೇಖನವನ್ನು ನಮ್ಮ ಓದುಗರಿಗಾಗಿ ಇಲ್ಲಿ ಪ್ರಕಟಿಸುತ್ತಿದ್ದೇವೆ. ಬ್ಯಾಂಕಿಂಗ್ ಸೇವೆಯಲ್ಲಿ ನಿರತರಾದವರೆಲ್ಲ ಮೆಲುಕು ಹಾಕಬೇಕಾದ ವಿಚಾರ.

**ಗಣೇಶ ಭಟ್ ಉಪ್ಪೋಣಿ**

''ಏನಪ್ಪಾ ಏನು ಬೇಕಿತ್ತು''—ಬಹಳಷ್ಟು ರೈತರು ಬ್ಯಾಂಕನ್ನು ಪ್ರವೇಶಿಸಿದಾಗ ಕೇಳಿಸಿಕೊಳ್ಳುವ ಪ್ರಶ್ನೆ. ಪಂಚೆ ಉಟ್ಟು, ಬ್ಯಾಂಕನ್ನು ಪ್ರವೇಶಿಸುವ, ಅಥವಾ 'ಪಟಗಾ' (ಉತ್ತರ ಕರ್ನಾಟಕದ ರೈತರು ಧರಿಸುವ ಪೇಟ ಅಥವಾ ಮುಂಡಾಸು) ಧರಿಸಿ ಬರುವ ರೈತನಿಗೆ ಬಹುವಚನ ಕೊಟ್ಟು ಸಂಬೋಧಿಸಲಾರದಷ್ಟು ಗೌರವವನ್ನು ರೈತ ವರ್ಗದ ಬಗ್ಗೆ ಬೆಳೆಸಿಕೊಂಡವರು ನಾವು. ರೈತನೆಂದರೆ ನಮಗಿಂತ ಕೀಳು ವರ್ಗದವನೆಂಬ ಭಾವನೆ ತಾತನ ವಯಸ್ಸಿನ ರೈತನನ್ನು ಮೀಸೆ ಸರಿಯಾಗಿ ಮೂಡಿರದ ಬ್ಯಾಂಕಿನ ಅಧಿಕಾರಿ ಅಥವಾ ಸಿಬ್ಬಂದಿ ಏಕವಚನದಲ್ಲಿ ಸಂಬೋಧಿಸಲು ಕಾರಣ ಈ ವಿಲಕ್ಷಣ ಕಲ್ಪನೆ.

ರೈತನಿಗೆ ಸಾಲ ನೀಡಿ ಅವನನ್ನು ಉದ್ಧರಿಸಲೇ ತಮ್ಮ ಅವತಾರವಾಗಿದೆಯೆಂದು ನಂಬಿರುವ ಹಲವು ಬ್ಯಾಂಕ್ ಸಿಬ್ಬಂದಿಗಳಿಂದಾಗಿ ರೈತ ಅಥವಾ ಹಳ್ಳಿಯ ಜನ ಬ್ಯಾಂಕನ್ನು ಪ್ರವೇಶಿಸಿದಾಗ ಇವರಿಗೆ ಕೂಡಲು ಸರಿಯಾದ ಆಸನ ವ್ಯವಸ್ಥೆಯನ್ನು ಒದಗಿಸಲಾರದ, ಅದಕ್ಕಾಗಿ ಕಿಂಚಿತ್ತೂ ಅನಿಸಿಕೆಗಳನ್ನು ಪ್ರಕಟಿಸದ ಸಿಬ್ಬಂದಿಗಳಿದ್ದಾರೆ. 1970ರ ದಶಕದ ಕೊನೆಯವರೆಗೂ ಉತ್ತರ ಕರ್ನಾಟಕದ ಹಲವು ಬ್ಯಾಂಕು ಶಾಖೆಗಳಲ್ಲಿ ರೈತರನ್ನು ನೆಲದ ಮೇಲೆ ಕೂಡ್ರಿಸುವ ಪರಿಪಾಠ ಇತ್ತು. ಕೃಷಿ ಪದವೀಧರರಾದ ಕೃಷಿ ಅಧಿಕಾರಿಯನ್ನೊಳಗೊಂಡ ಸಿಬ್ಬಂದಿ ವರ್ಗ ಇದರಿಂದ ಕ್ರೂರ ಸಂತೋಷವನ್ನು ಅನುಭವಿಸುತ್ತಿರುವುದನ್ನು ಕಣ್ಣಾರೆ ಕಂಡಿದ್ದೇನೆ. ಕುರ್ಚಿ ಬೆಂಚುಗಳನ್ನು ಗ್ರಾಹಕರ ಸಲುವಾಗಿಯೇ ಇರಿಸಿದ್ದರೂ ಈ ಬಡ ರೈತ ಗ್ರಾಹಕನಾಗಿ ನಮ್ಮ ಬ್ಯಾಂಕಿನ ಸಿಬ್ಬಂದಿಗಳಿಗೆ ಕಾಣಿಸಿಕೊಳ್ಳುವುದೇ ಅಪರೂಪ.

ಬ್ಯಾಂಕುಗಳು ರಾಷ್ಟ್ರೀಕರಣಗೊಂಡ ಅನಂತರ ಕೃಷಿರಂಗಕ್ಕೆ ಸಾಲ ಸೌಲಭ್ಯ ಹೆಚ್ಚಿನ ಪ್ರಮಾಣದಲ್ಲಿ ಪ್ರಾರಂಭವಾಯಿತು. ಬಹಳಷ್ಟು ಬ್ಯಾಂಕುಗಳು ಕೃಷಿ ಪದವೀಧರರನ್ನು 'ಕೃಷಿ ಅಧಿಕಾರಿ' ಎಂದು ನಿಯಮಿಸಿಕೊಂಡವು. ಮೊದಮೊದಲು ಈ ಕೃಷಿಕರನ್ನು ಮಾತನಾಡಿಸಲು ಸಹ ತಯಾರಿರದ ಬ್ಯಾಂಕ್ ಸಿಬ್ಬಂದಿ ವರ್ಗ 'ಇದೋ ನಿನ್ನ ಪರಿವಾರ ಬಂತು' ಅಥವಾ 'ನಿನ್ನ ಸಂಬಂಧಿಗಳು ಬರುತ್ತಿದ್ದಾರೆ' ಮುಂತಾಗಿ ಕೃಷಿ ಅಧಿಕಾರಿಯನ್ನು ಚುಡಾಯಿಸುವುದು ಸರ್ವೇಸಾಮಾನ್ಯವಾಗಿತ್ತು. ಇದೇ ರೀತಿಯಾಗಿ ಹಳ್ಳಿಗನೊಬ್ಬ ಬ್ಯಾಂಕನ್ನು ಪ್ರವೇಶಿಸುವಾಗಲೇ, ''ನಿನ್ನ ಸಾಹೇಬರು ಊರಲ್ಲಿ ಇಲ್ಲ, ಅವರು ಎರಡು ದಿನ ಬಿಟ್ಟು ಬರುತ್ತಾರೆ. ಆಮೇಲೆ ಬಾ'' ಎಂಬ ಹೇಳಿಕೆಯನ್ನೂ ಕೇಳಬೇಕಾಗಿತ್ತು. ಇದಕ್ಕೆ ಕಾರಣ—ಕೃಷಿಕರನ್ನೂ ಬ್ಯಾಂಕಿನ ಗ್ರಾಹಕರೆಂದು, ಕೃಷಿ ಚಟುವಟಿಕೆಗೆ ನೀಡುವ ಸಾಲಸೌಲಭ್ಯ

* ಕೃಪೆ: ಅಡಿಕೆ ಪತ್ರಿಕೆ (ಅಕ್ಟೋಬರ್ 1990), ಏಳ್ಮುಡಿ, ಅಂಚೆ ಪೆಟ್ಟಿಗೆ 29, ಪುತ್ತೂರು 574 201.

ಗಳು ಆ ಬ್ಯಾಂಕಿಂಗ್ ವ್ಯವಸ್ಥೆಯ ಒಂದು ಅಂಗವೆಂದು ಒಪ್ಪಿಕೊಳ್ಳಲು ಈ ಜನ ತಯಾರಿರಲಿಲ್ಲ. ಬ್ಯಾಂಕುಗಳು ರಾಷ್ಟ್ರೀಕೃತಗೊಂಡು ಎರಡು ದಶಕ ಕಳೆದರೂ, ಈ ಸ್ಥಿತಿ ಇನ್ನೂ ಯಥಾಸ್ಥಿತಿಯಾಗಿರುವುದು ಖೇದಕರ. ಹಳ್ಳಿಗನೊಬ್ಬನನ್ನು ಬ್ಯಾಂಕಿನ ಎದುರು ನೋಡಿದರೆ ಅವನು ಬಂದಿರುವುದೇ ಸಾಲ ಪಡೆಯಲು ಎಂಬ ತೀರ್ಮಾನಕ್ಕೆ ಜಿಗಿಯುವ ನಮ್ಮ ಬುದ್ಧಿಜೀವಿಗಳ ವೈಖರಿಯಿದು. ಅವನು ಸಾಲ ಪಡೆಯಲು ಬಂದಿದ್ದಾನೋ, ಸಾಲ ಮರುಪಾವತಿಗಾಗಿ ಬಂದಿದ್ದಾನೋ ಅಥವಾ ಠೇವಣಿ ಇಡಲು ಬಂದಿದ್ದಾನೋ ಎಂದು ಕೂಲಂಕಷವಾಗಿ ವಿಚಾರಿಸುವ ತಾಳ್ಮೆಯೂ ಇಲ್ಲದ್ದರ ಪರಿಣಾಮ.

ರೈತರು ಅಥವಾ ಐಆರ್‌ಡಿಪಿಯ ಫಲಾನುಭವಿಗಳು ಬ್ಯಾಂಕಿನೊಳಗೆ ಕಾಲಿಡುವ ಮೊದಲೇ ಅವರ ಬಗ್ಗೆ ಪೂರ್ವಾಗ್ರಹ ತುಂಬಿಕೊಂಡಿರುತ್ತದೆ. ಸರಕಾರದಿಂದ ದೊರಕುವ ಸಬ್ಸಿಡಿಗಾಗಿಯೇ ಇವರು ಬದುಕಿದ್ದಾರೆ ಎಂಬ ತಾತ್ಸಾರ ಮನೋಭಾವವನ್ನು ಪ್ರದರ್ಶಿಸುವ ಸಿಬ್ಬಂದಿಗಳಿಗೆ ತಾವು ತಮ್ಮ ಸಂಘಟನೆಯ ಬಲದಿಂದ ಸರಕಾರವನ್ನೂ ಸಾರ್ವಜನಿಕರನ್ನೂ ಸುಲಿಯುತ್ತಿದ್ದೇವೆ ಎಂಬುದು ಮರೆತುಹೋಗಿರುತ್ತದೆ. ಇಡೀ ತಾಲೂಕಿಗೆ ಹಂಚಲ್ಪಡುವ ಸಬ್ಸಿಡಿಯ ಮೊತ್ತ 5ರಿಂದ 8 ಲಕ್ಷ ರೂಪಾಯಿಗಳು. ಇದರ ಒಟ್ಟು ಫಲಾನುಭವಿಗಳು ಸುಮಾರು ಐದುನೂರರಷ್ಟು ಜನರು ಆಗಬಹುದು. ಆದರೆ, ಸಣ್ಣ ಉದ್ಯಮದ ಹೆಸರಿನಲ್ಲಿ ಏಕವ್ಯಕ್ತಿ ಅಥವಾ ಸಂಸ್ಥೆ ಸಬ್ಸಿಡಿಯ ರೂಪದಲ್ಲಿ ಲಕ್ಷಾಂತರ ರೂಪಾಯಿಯನ್ನು ದೋಚುವದು ಈ ಜನಕ್ಕೆ ಕಾಣುವುದೇ ಇಲ್ಲ.

ಕೃಷಿ ಮತ್ತು ಇತರ ಉದ್ದೇಶಗಳಿಗೆ ನೀಡುವ ಸಾಲದೊಡನೆ ಇನ್ನೊಂದು ಹೊಸ ತಲೆನೋವು. ಅದೆಂದರೆ ಪ್ರತಿ ತಿಂಗಳಿಗೊಮ್ಮೆ ಹಲವಾರು ರೀತಿಯ ವರದಿಗಳನ್ನು ತಯಾರು ಮಾಡಬೇಕು. ಈ ಕ್ಷೇತ್ರಗಳಿಗೆ ಧನಸಹಾಯ ಪ್ರಾರಂಭವಾದ ನಂತರವೇ ಬ್ಯಾಂಕುಗಳಿಗೆ ಪುಢಾರಿಗಳ ಪ್ರವೇಶವಾಗಿದ್ದು. ಗಜಗಂಭೀರತೆಯಿಂದಿರುತ್ತ, ವ್ಯಾಪಾರೀ ವರ್ಗದೊಡನೆ ಹಲ್ಲು ಕಿರಿಯುತ್ತ, ಅವರು ನೀಡುವ ಪಾರ್ಟಿಗಳಿಗೆ, ಆಗಾಗ ನೀಡುವ ಕಿರುಕಾಣಿಕೆಗಳಿಗೆ ಮನದಲ್ಲೇ ಆಸೆ ಪಡುತ್ತ, ಸುಖವಾಗಿ ಕಾಲ ತಳ್ಳುತ್ತಿದ್ದ ನಗರ ಮನೋಭಾವೀ ಜನರಿಗೆ ಒಮ್ಮೆಲೇ ಹಳ್ಳಿಗರ ದಂಡು ದಂಡೇ ಬ್ಯಾಂಕಿನಲ್ಲಿ ಬಂದಿಳಿದಿದ್ದು ನುಂಗಲಾರದ ತುತ್ತಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಬ್ಯಾಂಕಿಂಗ್ ಪ್ರಾರಂಭವಾದ ನಂತರ ಅಗಾಧ ಪ್ರಮಾಣದಲ್ಲಿ ಹೆಚ್ಚಿದ ಶಾಖೆಗಳಿಂದಾಗಿ ಉದ್ಯೋಗಾವಕಾಶಗಳು ಹೆಚ್ಚಿದ್ದು, ಅದರಿಂದಾಗಿಯೇ ತಮಗೂ ಒಂದು ನೌಕರಿ ಸಿಕ್ಕಿತು ಎಂದು ಅರಿತುಕೊಂಡವರು ತೀರಾ ವಿರಳ. ಗ್ರಾಮೀಣ ಪ್ರದೇಶಗಳಿಗೆ ಹೋಗುವದೆಂದರೆ ಒಂದು ರೀತಿಯ ಮುಜುಗರಪಟ್ಟುಕೊಂಡು, ತೀರ ಅನಿವಾರ್ಯ ಎನ್ನುವ

[9ನೇ ಪುಟ ನೋಡಿ

# ಪರಿಯೋಜನಾ ವರದಿ: ಬ್ಯಾಂಕರನ ದೃಷ್ಟಿ

**ವ್ಯಾಪಾರಿ ಅಥವಾ ಕೈಗಾರಿಕೋದ್ಯಮಿಯೊಬ್ಬ ಬ್ಯಾಂಕಿನಿಂದ ಸಾಲ ಬಯಸಿದಾಗ ತನ್ನ ಉದ್ಯಮ ಕುರಿತ ಪ್ರವರಗಳನ್ನು ಸೂಚಿಸುವ ವರದಿಯೊಂದನ್ನು ಆ ಸಂಸ್ಥೆಗೆ ಸಲ್ಲಿಸುತ್ತಾನೆ. ಇದು ಪರಿಯೋಜನಾ ವರದಿ. ತಾನು ನೀಡುವ ಉದರಿ ಸಾರ್ಥಕವಾಗಬೇಕಾದರೆ ಬ್ಯಾಂಕು ಈ ಪರಿಯೋಜನಾ ವರದಿಯನ್ನು ಅತ್ಯಂತ ಎಚ್ಚರಿಕೆಯಿಂದ ಪರಿಶೀಲಿಸಬೇಕಾಗುತ್ತದೆ. ಅದರಲ್ಲಿನ ಅಂಕಿ-ಅಂಶಗಳ ಹಿಂದೆ ಕಣ್ಣು ಹಾಯಿಸಬೇಕಾಗುತ್ತದೆ.**

**ಜಿ. ಎನ್. ನರಸಿಂಹಮೂರ್ತಿ**
ಭಾರತೀಯ ಸ್ಟೇಟ್ ಬ್ಯಾಂಕ್, ಬಂದರ್ ರಸ್ತೆ,
ಮಂಗಳೂರು 575 001

ವ್ಯಾಪಾರಿಗಳೂ ಕೈಗಾರಿಕೋದ್ಯಮಿಗಳೂ ತಮ್ಮ ಆರ್ಥಿಕ ಆವಶ್ಯಕತೆಗಳಿಗನುಗುಣವಾಗಿ ಬ್ಯಾಂಕ್ ಅಥವಾ ಬ್ಯಾಂಕೇತರಹಣಕಾಸುಸಂಸ್ಥೆಗಳನ್ನು ಉದರಿಗಾಗಿ ಸಂಪರ್ಕಿಸಿದಾಗ ಆ ಸಂಸ್ಥೆಗಳ ಪರಿಶೀಲನೆಗಾಗಿ ತಮ್ಮ ಉದ್ಯಮವನ್ನು ಕುರಿತಂತೆ ಹಲವು ವಿವರಗಳಿರುವ ವರದಿಯೊಂದನ್ನು ಸಲ್ಲಿಸುತ್ತಾರೆ. ಇಂತಹ ವರದಿಯನ್ನು ಉದ್ಯಮಿಗಳು ತಮಗೆ ಸಲ್ಲಿಸುತ್ತಾರೆ ಎಂದು ಆ ಸಂಸ್ಥೆಗಳು ನಿರೀಕ್ಷಿಸುತ್ತವೆ ಕೂಡ. ಈ ವರದಿ ಉದ್ಯಮಿ, ಬ್ಯಾಂಕ್ ಅಥವಾ ಇತರ ಹಣಕಾಸು ಸಂಸ್ಥೆ—ಎರಡಕ್ಕೂ ಅತ್ಯಾವಶ್ಯಕ. ಈ ವರದಿಯನ್ನು ಪರಿಯೋಜನಾ ವರದಿ ಎನ್ನುತ್ತಾರೆ.

ಪರಿಯೋಜನಾ ವರದಿ ಉದ್ಯಮಿಯ ಪರಿಚಯ, ಹಿನ್ನೆಲೆ, ಅನುಭವಗಳನ್ನು ಸೂಚಿಸುವುದಲ್ಲದೆ, ಅವರು ಕೈಗೆತ್ತಿಕೊಳ್ಳಲಿರುವ ಉತ್ಪನ್ನ, ಉತ್ಪಾದನೆಯ ಸ್ಥಳ, ಆವಶ್ಯಕವಾದ ಕಚ್ಚಾಸಾಮಗ್ರಿಗಳು, ಮಾರುಕಟ್ಟೆ, ಉದ್ಯಮದ ಪರಿಯೋಜನಾ ವೆಚ್ಚ, ಸದ್ಯದ ಹಣಕಾಸು ಸ್ಥಿತಿ, ಮುಂದಿನ ವರ್ಷಗಳ ಮಾರಾಟ, ಹಣಕಾಸು ಸ್ಥಿತಿಗಳ ಪ್ರಕ್ಷೇಪಣ ಮುಂತಾದ ವಿವರಗಳನ್ನು ನೀಡುತ್ತದೆ. ಒಂದು ರೀತಿಯಲ್ಲಿ ಇದು ಉದ್ಯಮದ ನೀಲಿನಕಾಸೆ, ಭವಿಷ್ಯಗನ್ನಡಿ.

ಘಟಕವೊಂದನ್ನು ಕುರಿತಂತೆ ಬ್ಯಾಂಕರನ ಮುಂದೆ ಇಂಥ ವರದಿಯೊಂದು ಮಂಡಿತವಾದಾಗ, ಘಟಕ ಉದರಿಯೋಗ್ಯವೇ ಎಂಬುದನ್ನು ನಿರ್ಧರಿಸಲು ಬ್ಯಾಂಕರ್ ಆ ವರದಿಯ ಅನೇಕ ಅಂಶಗಳನ್ನು ಜಾಗರೂಕತೆಯಿಂದ ಪರಿಶೀಲಿಸಬೇಕಾಗುತ್ತದೆ. ಅನೇಕ ಸಂಗತಿಗಳನ್ನು ಮನವರಿಕೆ ಮಾಡಿಕೊಳ್ಳಬೇಕಾಗುತ್ತದೆ. ಪರಿಯೋಜನಾ ವರದಿ ಬ್ಯಾಂಕರನ ಹಾಗೂ ಉದ್ಯಮಿಯ ನಡುವಣ ಪ್ರಥಮ ಸಂಪರ್ಕ ಸೇತುವಾಗಿದ್ದು, ಉದ್ಯಮದ ಬಹುತೇಕ ಅಂಶಗಳನ್ನು ಬಿಂಬಿಸುತ್ತದೆ. ಈ ಬಿಂಬದಲ್ಲಿ ಬ್ಯಾಂಕರ್ ಪರಿಶೀಲಿಸಬೇಕಾದ ಅಂಶಗಳೇನು, ಯಾವುದಕ್ಕೆ ಎಷ್ಟು ಮಹತ್ವ ನೀಡಬೇಕು ಎಂಬುದನ್ನು ಸ್ಥೂಲವಾಗಿ ಚರ್ಚಿಸುವುದೇ ಈ ಲೇಖನದ ಉದ್ದೇಶ.

ಪರಿಯೋಜನಾ ವರದಿಯೊಂದು ಈಗಾಗಲೇ ವಿಪುಲವಾಗಿ ಬಳಕೆಯಲ್ಲಿರುವ ಉತ್ಪನ್ನವನ್ನು ಕುರಿತದ್ದಾದರೆ ಬ್ಯಾಂಕರನ ಅಪಾರ ಅನುಭವ ಅವನ ನೆರವಿಗೆ ಬರುತ್ತದೆ. ಅಂಥ ಉತ್ಪನ್ನಕ್ಕಾಗಿ ತಾನು ಈಗಾಗಲೇ ಉದರಿ ನೀಡಿರುವ ಹಿನ್ನೆಲೆಯಲ್ಲಿ ತೀರ್ಮಾನ ಸುಲಭವಾಗುತ್ತದೆ. ಬ್ಯಾಂಕರನಿಗೆ ಸಾಮಾನ್ಯವಾಗಿ ಚಾಲ್ತಿಯಲ್ಲಿರುವ ಅನೇಕ ಕೈಗಾರಿಕೆಗಳನ್ನು ಕುರಿತ ಶಿಷ್ಟೀಕೃತ ಅಂಕಿ ಅಂಶಗಳು ಲಭ್ಯವಿರುತ್ತವೆ. ಇವನ್ನು ಬ್ಯಾಂಕರ್ ಸದಾ ಅಧುನೀತಗೊಳಿಸಿಕೊಳ್ಳಬೇಕಾಗುತ್ತದೆ. ಹಾಗಾದರೆ ಮಾತ್ರ ಅಂಕಿ-ಅಂಶಗಳ ಸಮರ್ಪಕ ಬಳಕೆ ಸಾಧ್ಯ.

## ಅಧ್ಯಯನದ ಮಿತಿ

ಹೊಚ್ಚಹೊಸ ಉದ್ಯಮದ ಪರಿಯೋಜನೆಯೊಂದು ಬ್ಯಾಂಕರನ ಮುಂದೆ ಧುತ್ತನೆ ಬಂದಾಗ ಬ್ಯಾಂಕರನಿಗೆ ಸಂದಿಗ್ಧಸ್ಥಿತಿ ಒದಗಬಹುದು. ಅದನ್ನು ಕೈಗೆತ್ತಿಕೊಳ್ಳಲು ಅಧಿಕ ನಷ್ಟಸಂಭವದ ಆತಂಕ, ಬಿಟ್ಟುಬಿಡಲು ಹೊಸ ಉದ್ಯಮಕ್ಕೆ ಉತ್ತೇಜನ ನೀಡಬೇಕಾದ ಜವಾಬ್ದಾರಿಗಳು ಬ್ಯಾಂಕರನನ್ನು ಬಾಧಿಸಬಹುದು. ಒಂದು ಉದಾಹರಣೆಯನ್ನಿತ್ತರೆ ಇದು ಸ್ಪಷ್ಟವಾದೀತು. ಭಾರತದಲ್ಲಿ ಇದೀಗ ಒಂದು

ನೆಲೆಯನ್ನುಕಂಡುಕೊಳ್ಳುತ್ತಿರುವ ಗಣಕದ ಉದ್ಯಮ ಬಹುಶಃ ಸಮರ್ಪಕ ನಿದರ್ಶನವಾಗಬಹುದು. ಭಾರತದ ಎಲ್ಲ ಬ್ಯಾಂಕುಗಳು ಈ ಉದ್ಯಮಕ್ಕೆ ಅಭೂತಪೂರ್ವ ಸ್ವಾಗತವೀಯದಿದ್ದರೂ ಇದನ್ನು ಸ್ವಾಗತಿಸಿದುವು. ವಸ್ತುಶಃ, ಇಂದು ಅನೇಕ ಗಣಕೋದ್ಯಮಗಳು ಅಸ್ವಸ್ಥವಾಗಿವೆ. ತೀವ್ರವಾದ ಬೆಲೆ ಕುಸಿತ, ಅತ್ಯಂತ ಬಿರುಸಿನ ಸ್ಪರ್ಧೆ, ಆರಂಭದ ಹೆಚ್ಚಿನ ವಿನಿಯೋಜನೆ ಮುಂತಾದವು ಇದಕ್ಕೆ ಬಹುಮಟ್ಟಿಗೆ ಕಾರಣವಾದರೂ ಯಾವ ಬ್ಯಾಂಕರನೂ ಈ ಉದ್ಯಮದ ಏರುಪೇರುಗಳನ್ನು ಮುಂಗಾಣಲಾರನಾದ. ತುಂಬ ದೊಡ್ಡ ಪ್ರಮಾಣದ ಗಣಕೋದ್ಯಮಗಳು ಮಾತ್ರ ಉಳಿದು ಸಣ್ಣ ಉದ್ಯಮಗಳು ತತ್ತರಿಸುವಂಥ ಬೆಳವಣಿಗೆಗಳಾದದ್ದನ್ನು ನಾವು ಗುರುತಿಸಬಹುದು. ಇದು ಪರಿಯೋಜನಾ ವರದಿಯ ಅಧ್ಯಯನದ ಮಿತಿಯನ್ನೂ ಸೂಚಿಸುತ್ತದೆ. ಈ ಅಂಶವನ್ನು ಬ್ಯಾಂಕರ್ ಸದಾ ತನ್ನ ಗಮನದಲ್ಲಿ ಇರಿಸಿಕೊಳ್ಳಬೇಕಾಗುತ್ತದೆ.

### ಪರಿಗಣಿಸಬೇಕಾದ ಸಂಗತಿಗಳು

ಆದರೆ ಪರಿಯೋಜನಾ ವರದಿಯ ಅಧ್ಯಯನವನ್ನು ಕೈಬಿಡುವಂತಿಲ್ಲ. ಅದರಲ್ಲಿ ಬ್ಯಾಂಕರ್ ಮುಖ್ಯವಾಗಿ ಗಮನಿಸಬೇಕಾದ ಸಂಗತಿಗಳನ್ನು ಒಂದೊಂದಾಗಿ ಗಮನಿಸಬಹುದು.

**ಉತ್ಪನ್ನ :** ಮೊತ್ತಮೊದಲಾಗಿ ಘಟಕದಿಂದ ಹೊರಬರುವ ಉತ್ಪನ್ನದ ಕಡೆಗೇ ನಮ್ಮ ದೃಷ್ಟಿ ಹರಿಯಬೇಕು. ಉತ್ಪನ್ನದ ಬಳಕೆ ಎಲ್ಲಿ? ಇದು ಹೊಸ ಉತ್ಪನ್ನವೆ? ಇದಕ್ಕೆ ತೀವ್ರ ಸ್ಪರ್ಧೆ ಇದೆಯೆ ? ಅಮದು ಪರ್ಯಾಯವೆ ? ಸಾರ್ವಜನಿಕ ಅನುಭೋಗ ವಸ್ತುವೆ? ತುಂಬ ಅಗತ್ಯದ್ದೆ ? ಎಂಬೆಲ್ಲ ದೃಷ್ಟಿಯಿಂದ ಉತ್ಪನ್ನದ ಬಗ್ಗೆ ಪರಿಯೋಜನಾ ವರದಿಯಲ್ಲಿ ಸೂಚಿಸಿರುವುದನ್ನು ಗಮನಿಸಬೇಕಾಗುತ್ತದೆ.

**ಪ್ರವರ್ತಕರು :** ಅನಂತರ ಗಮನಿಸಬೇಕಾದ ಅಂಶವೆಂದರೆ ಉದ್ಯಮದ ಪ್ರವರ್ತಕರನ್ನು ಕುರಿತದ್ದು. ಪ್ರವರ್ತಕರಿಗೆ ಈ ಕ್ಷೇತ್ರ ಪರಿಚಿತವೆ ? ಅವರ ಹಿನ್ನೆಲೆ, ಅರ್ಹತೆಗಳು, ಅವರ ಹಣಕಾಸು ಸ್ಥಿತಿ, ಉದ್ಯಮದ ಬಗ್ಗೆ ಅವರ ಆಸಕ್ತಿ ದೃಢವೆ? ಇಂಥ ಪ್ರಶ್ನೆಗಳಿಗೆ ಸಮಾಧಾನಕರ ಉತ್ತರ ದೊರೆತರೆ ಮಾತ್ರವೇ ಮುಂದಿನ ಹೆಜ್ಜೆ. ಏಕೆಂದರೆ ಉದ್ಯಮವನ್ನು ದಿನನಿತ್ಯ ಪೋಷಿಸಿ ಬೆಳೆಸಬೇಕಾದವರು ಇವರು. ಇವರನ್ನು ಕುರಿತು ಪರಿಯೋಜನಾ ವರದಿ ಎಷ್ಟು ಹೆಚ್ಚಾಗಿ ತಿಳಿಸುವುದೋ ಅಷ್ಟರಮಟ್ಟಿಗೆ ಬ್ಯಾಂಕರನಿಗೆ ಅದು ಸಹಾಯಕ. ಉದ್ಯಮಿಯ ಆಸಕ್ತಿ, ಅನುಭವ, ಉತ್ಪನ್ನವನ್ನು ಕುರಿತ ಜ್ಞಾನ ಇವು ಸಮಂಜಸ ಎನ್ನುವಂತಿಲ್ಲದಿದ್ದರೆ ಹಣಕಾಸು ಸ್ಥಿತಿ ಎಷ್ಟು ಉತ್ತಮವಾಗಿದ್ದರೂ ಪ್ರಯೋಜನಕಾರಿಯಾಗದು. ಘಟಕದ ಮುಂಬರುವ ದಿನಗಳನ್ನು ಕುರಿತು ಖಾತರಿಯಾಗಿ ಹೀಗೇ ಎಂದುಹೇಳಲಾಗದು.

**ಸಂಸ್ಥೆ :** ಸಂಸ್ಥೆಯ ಸಂಘಟನೆಯ ಸ್ವರೂಪವೆಂಥದು ? ಅದು ಏಕವ್ಯಕ್ತಿ ಒಡೆತನವೆ, ಪಾಲುದಾರಿಕೆಯೆ, ಖಾಸಗಿ ಕಂಪನಿಯೆ, ಸಾರ್ವಜನಿಕ ಕಂಪನಿಯೆ ? ಎಂಬುದು ಸ್ಪಷ್ಟವಾಗಿ, ಪರಿಯೋಜನಾ ವರದಿಯಲ್ಲಿ ನಿರೂಪಿತವಾಗಿದ್ದಲ್ಲಿ, ಬ್ಯಾಂಕರನಿಗೆ ಅನುಕೂಲ. ಸಂಘಟನೆಯ ಸ್ವರೂಪಕ್ಕನುಗುಣವಾಗಿ, ಬ್ಯಾಂಕರ್ ಸಂಸ್ಥೆಯನ್ನು ಕುರಿತಂತೆ ತನ್ನ ಪ್ರಶ್ನೆಗಳನ್ನು ಹಾಕಬಹುದು. ಉದಾಹರಣೆಗೆ ಖಾಸಗಿ ಕಂಪನಿಯಾದಲ್ಲಿ ಅದು ಕ್ರಮಬದ್ಧವಾಗಿ ನೋಂದಾಯಿತವಾಗಿದೆಯೆ ? ಸಾರ್ವಜನಿಕ ನಿಯಮಿತ ಕಂಪನಿಯಾದಲ್ಲಿ ವ್ಯವಹಾರ ಪ್ರಾರಂಭ ಪ್ರಮಾಣಪತ್ರ ಪಡೆಯಲಾಗಿದೆಯೆ ? ಮುಂತಾದವು. ಇವನ್ನೆಲ್ಲ ಬ್ಯಾಂಕರ್ ತುಂಬ ಜಾಗರೂಕತೆಯಿಂದ ಗಮನಿಸಬೇಕಾಗುತ್ತದೆ.

**ಸ್ಥಳ :** ಪರಿಯೋಜನಾ ವರದಿಯಲ್ಲಿ ತುಂಬ ಪ್ರಮುಖವಾಗಿ ಪ್ರಸ್ತಾಪಿತವಾಗಬೇಕಾದ ಅಂಶವೆಂದರೆ ಉದ್ಯಮ ಬೇರೂರಬೇಕಾದ ಸ್ಥಳ. ಬ್ಯಾಂಕರ್ ಇದನ್ನು ನಾನಾ ದೃಷ್ಟಿಗಳಿಂದ ನೋಡಬೇಕಾಗುತ್ತದೆ. ಈ ಜಾಗದಲ್ಲಿ ಮೂಲಭೂತ ಸೌಲಭ್ಯಗಳಾದ ರಸ್ತೆ, ನೀರು, ವಿದ್ಯುತ್ತು ಲಭ್ಯವಿವೆಯೆ ? ಉತ್ಪನ್ನದ ತಯಾರಿಕೆಗೆ ಅಲ್ಲಿನ ವಾತಾವರಣ ಬಾಧಕವಲ್ಲವಷ್ಟೆ ? ಅಲ್ಲಿ ನುರಿತ ಕಾರ್ಮಿಕರು

## ಬ್ಯಾಂಕು ಮತ್ತು ರೈತ—ಕೌಂಟರಿನೀಚೆಯಿಂದ

[8ನೇ ಪುಟದಿಂದ ಮುಂದುವರಿದುದು]

ಪರಿಸ್ಥಿತಿಯಲ್ಲಿ ಹೋಗಿ, ಕೆಲವೇ ದಿನಗಳಲ್ಲಿ ರಿಕ್ವೆಸ್ಟ್ ಟ್ರಾನ್ಸ್‌ಫರ್' (ವಿನಂತಿಯಿಂದ ವರ್ಗಾವಣೆ) ಅರ್ಜಿ ಕಳಿಸದವರು ತೀರಾ ಕಡಿಮೆ. ನಗರದ ಸೌಲಭ್ಯಗಳಿಂದ ವಂಚಿತರಾಗಿ ಸಣ್ಣಪುಟ್ಟ ಪಟ್ಟಣಗಳಲ್ಲಿ ಅಥವಾ ಹಳ್ಳಿಗಳಲ್ಲಿ ಕೆಲಸ ಮಾಡುವಾಗ ಇದಕ್ಕೆ ಕಾರಣ ಈ ರೈತರೇ ಎಂಬ ಭಾವನೆ ಬೆಳೆಸಿಕೊಂಡು ಅವರನ್ನೆಲ್ಲಾ ಸಾರಾಸಗಟಾಗಿ 'ವಿಲನ್'ಗಳೆಂದು ಪರಿಗಣಿಸುವ ಬ್ಯಾಂಕ್ ಉದ್ಯೋಗಿಗಳಿಂದ ಇದಕ್ಕೂ ಹೆಚ್ಚಿನ ಸೌಜನ್ಯ ಸಿಗುವದೂ ದುಸ್ತರವಾದೀತು.

ಬ್ಯಾಂಕುಗಳಲ್ಲಿ ಆಗಾಗ ಗ್ರಾಹಕರ ಕುಂದುಕೊರತೆಗಳನ್ನು ವಿಚಾರಿಸುವ ನಾಟಕ ನಡೆಸುವ ಪರಿಪಾಠವಿದೆ. ಅದರೊಂದಿಗೆ ಒಬ್ಬ ವ್ಯಕ್ತಿಯ ನಡವಳಿಕೆಯ ವಿರುದ್ಧ ಹೆಚ್ಚು ತಕರಾರುಗಳು ಬಂದರೆ ಅವನನ್ನು ಶಾಖೆಯಿಂದ ಆಡಳಿತ ಕಛೇರಿಗಳಿಗೆ ವರ್ಗಾಯಿಸುವ ಪರಿಪಾಠವೂ ಇದೆ. ಇದರ ಲಾಭವನ್ನು ಪಡೆಯಲು ಕೆಲವು ಅಧಿಕಾರಿಗಳು ಉದ್ದೇಶಪೂರ್ವಕವಾಗಿ(ತಮಗೆ ಬೇಡವಾದ ಸ್ಥಳದಲ್ಲಿದ್ದಾಗ) ರೈತರನ್ನು ಸತಾಯಿಸುವುದೂ ಇದೆ. ಮೂಗರ್ಜಿ ಬರೆಯುವದರಲ್ಲಿ ಪ್ರತಿ ಹಳ್ಳಿಯಲ್ಲೂ ಪರಿಣತರು ಇದ್ದೇ ಇರುತ್ತಾರೆ. ಇಂತಹವರಿಂದ ಅರ್ಜಿಗಳು ಸಾಲುಗಟ್ಟಿ ಹೋಗತೊಡಗಿದಾಗ ಅಧಿಕಾರಿಗಳಿಗೆ ಆಡಳಿತ ಕಛೇರಿಗೆ ವರ್ಗಾವಣೆ. ಇಂತಹ ಕಛೇರಿಗಳು ನಗರ ಪ್ರದೇಶದಲ್ಲೇ ಇರುವುದರಿಂದ ಅಧಿಕಾರಿಯ ಉದ್ದೇಶ ಸಫಲವಾಗಿ, ಯಾವನಾದರೂ ಮುಗ್ಧ ದೂರಿನಲ್ಲಿ ತನ್ನ ಹೆಸರನ್ನು ನಮೂದಿಸಿದ್ದರೆ ಮುಂದೆ ಬಂದ ಅಧಿಕಾರಿಯೊಂದಿಗೂ ನಿಷ್ಠುರ ಕಟ್ಟಿಕೊಳ್ಳುತ್ತಾನೆ.

ಬ್ಯಾಂಕಿಂಗ್ ವ್ಯವಸ್ಥೆ ಬೆಳೆದದ್ದೇ ನಗರ ಪ್ರದೇಶಗಳಲ್ಲಿ. ಅದರ ರೀತಿ, ನೀತಿ, ವ್ಯಾಪ್ತಿ, ವ್ಯವಹಾರ ಎಲ್ಲ ನಗರಪ್ರದೇಶ ಹಾಗೂ ವ್ಯಾಪಾರಿ ವರ್ಗವನ್ನೇ ಅವಲಂಬಿಸಿದ್ದವು. ರಾಷ್ಟ್ರೀಕರಣಗೊಂಡ ನಂತರ ಇವುಗಳ ಕಾರ್ಯವ್ಯಾಪ್ತಿ ಹಾಗೂ ಉದ್ದೇಶಗಳು ಇನ್ನೂ ವಿಶಾಲವಾದವು.

ಪ್ರಾರಂಭದಲ್ಲಿ ಈ ವಿಸ್ತೃತ ಉದ್ದೇಶಗಳೊಂದಿಗೆ ಹೊಂದಿಕೊಳ್ಳುವುದು ಬ್ಯಾಂಕ್ ಉದ್ಯೋಗಿಗಳಿಗೆ ಕಷ್ಟಕರವಾದದ್ದನ್ನು ಸಹಿಸಬಹುದು. ಆದರೆ, ಕಳೆದ ಎರಡು ದಶಕಗಳ ಅನುಭವದ ನಂತರವೂ ಸಹ ಇನ್ನೂ ಗ್ರಾಮೀಣ ಜನತೆಯ ಬಗೆಗೆ ಮಲತಾಯಿ ಧೋರಣೆ ತೋರುತ್ತಿರುವದನ್ನು ಗಮನಿಸಿದಾಗ ಇದೊಂದು ನಮ್ಮ ಸಾಮಾಜಿಕ-ಆರ್ಥಿಕ ವ್ಯವಸ್ಥೆಯ ದುರಂತವೆನ್ನಲೇಬೇಕಾಗುತ್ತದೆ. ತಮ್ಮ ಮೇಲಧಿಕಾರಿಗಳನ್ನು ಹಾಗೂ ರಾಜಕಾರಣಿಗಳನ್ನು ಮೆಚ್ಚಿಸಲು ಆದ್ಯತಾ ಕ್ಷೇತ್ರಕ್ಕೆ ಹೆಚ್ಚು ಗಮನ ಕೊಟ್ಟಂತೆ ಪ್ರದರ್ಶಿಸುವ ಹಲವು ಅಧಿಕಾರಿಗಳು ಇದನ್ನು ತಮ್ಮ ಪ್ರಮೋಶನ್‌ಗಳಿಗಾಗಿ ಉಪಯೋಗಿಸಿಕೊಳ್ಳುತ್ತಿದ್ದಾರೆಯೋ ಹೊರತು ರೈತಾಪಿ ಜನರ ಬಗ್ಗೆ ಇರುವ ನೈಜ ಕಳಕಳಿಯಿಂದಾಗಿ ಅಲ್ಲ.

"ಇದೇನ್ರೀ ನಮ್ಮ ಗ್ರಹಚಾರ, ಒಂದು ಲಕ್ಷ ರೂಪಾಯಿ ಒಂದು ಸಾವಿರ ಜನಕ್ಕೆ ಕೊಟ್ಟು, ವಸೂಲಿಗಾಗಿ ಅವರ ಬೆನ್ನು ಹತ್ತಿ ಅವರ ಹಿಂದೆ ಹುಡುಕುತ್ತಾ ಹೋಗುವ ಬದಲು ಯಾವುದೋ ಒಂದೋ ಎರಡೋ ಕಸ್ಟಮರ್ಸಿಗೆ ಕೊಟ್ಟಿದ್ರೆ ಬಡ್ಡೀನೂ ಹೆಚ್ಚು ಬರ್ತಿತ್ತು, ರಿಕವರಿ ಪ್ರಾಬ್ಲೆಮ್ಮೂ ಇರಲಿಲ್ಲ" ಎನ್ನುವ ಮಾತು ಹಲವು ಕಡೆ ಪದೇ ಪದೇ ಕೇಳಿಬರುತ್ತದೆ.

ರೈತನಿಗೆ ಹಾಗೂ ಇತರ ದುರ್ಬಲ ವರ್ಗಗಳಿಗೆ ಕಡಿಮೆ ದರದಲ್ಲಿ ಸಾಲ ಕೊಟ್ಟಿದ್ದು ತಪ್ಪು ಎಂದು ಗಂಟೆಗಟ್ಟಲೆ ವಾದಿಸುವ ಬ್ಯಾಂಕ್ ಉದ್ಯೋಗಿ ತನಗೆ ಬ್ಯಾಂಕು ನೀಡುವ ಸಾಲದ ಬಡ್ಡಿಯ ದರ ಶೇಕಡಾ 7 ದಾಟಿದಾಗ ಕಿರುಚತೊಡಗುತ್ತಾನೆ.

ಹಣ ಮತ್ತು ಸಂಪತ್ತು ಇವೇ ಜೀವನದ ಸರ್ವಸ್ವ ಎಂದು ಭಾವಿಸಿರುವ ಬಂಡವಾಳಶಾಹಿ ವ್ಯವಸ್ಥೆಯಲ್ಲಿ, ಇವೆಲ್ಲವನ್ನೂ ಲಾಭ ಗಳಿಕೆಯ ಮೌಲ್ಯದಿಂದಲೇ ಅಳೆಯಲಾಗುತ್ತದೆ. ಲಾಭ ನೇರವಾಗಿ ಕಣ್ಣಿಗೆ ಕಾಣದಾದಾಗ, "ಛೇ ಇದೊಂದು ಉಪದ್ರ" ಎಂದೇ ಎನಿಸುತ್ತದೆ. ಸಾಮಾಜಿಕ ಆರ್ಥಿಕ ವ್ಯವಸ್ಥೆಯಲ್ಲಿ ಬದಲಾವಣೆ ಆಗುವವರೆಗೂ ರೈತನ ಪಾಲಿಗೆ ಇದು ಅನಿವಾರ್ಯ.



ಷಿ

ದೊರೆಯುವವರೆ? ಇವೆಲ್ಲವನ್ನೂ ಗಮನಿಸಬೇಕಾಗುತ್ತದೆ. ಅಲ್ಲದೆ ಉತ್ಪನ್ನಕ್ಕೆ ಆವಶ್ಯಕವಾದ ಕಚ್ಚಾ ಸಾಮಗ್ರಿ ಸ್ಥಳೀಯವಾಗಿ ದೊರೆಯುತ್ತದೆಯೆ? ಅಥವಾ ದೊರೆಯುವ ಸ್ಥಳಕ್ಕೆ ಅದು ಸಮೀಪವಾಗಿದೆಯೆ? ಅಂತಿಮ ಉತ್ಪನ್ನದ ಪ್ರಮುಖ ಮಾರುಕಟ್ಟೆ ಈ ಜಾಗಕ್ಕೆ ಎಷ್ಟು ದೂರದಲ್ಲಿದೆ? ಈ ಜಾಗವನ್ನೇ ಉದ್ಯಮಕ್ಕೆ ಆಯ್ಕೆ ಮಾಡಿರುವ ಉದ್ದೇಶವೇನು? ಇಲ್ಲಿ ಉದ್ಯಮ ಸ್ಥಾಪಿತವಾದರೆ ದೊರೆಯಬಹುದಾದ ವಿಶೇಷ ಸೌಲಭ್ಯಗಳೇನು? ಮುಂದೆ ಉದ್ಯಮ ವಿಸ್ತರಿಸಬೇಕಾದಲ್ಲಿ ಈ ಸ್ಥಳ ಸಮರ್ಪಕವೆ? ಈ ಅಂಶಗಳನ್ನೂ ಬ್ಯಾಂಕರ್ ಪರಿಯೋಜನಾ ವರದಿಯಲ್ಲಿ ಎಚ್ಚರಿಕೆಯಿಂದ ಗಮನಿಸಬೇಕಾಗುತ್ತದೆ. ಏಕೆಂದರೆ ಒಮ್ಮೆ ಉದ್ಯಮ ಪ್ರಾರಂಭವಾದರೆ ಸ್ಥಳಾಂತರ ಬಹಳ ಪ್ರಯಾಸದ ಸಂಗತಿ. ಆದ್ದರಿಂದ ಸ್ಥಳದ ಕುರಿತು ಪರಿಯೋಜನಾ ವರದಿ ಎಷ್ಟು ಮಾಹಿತಿ ನೀಡಿದರೂ ಬ್ಯಾಂಕರನಿಗೆ ಸಾಲದು.

ಕಟ್ಟಡ: ಅನಂತರ ಕಟ್ಟಡದ ವಿಚಾರವನ್ನು ಗಮನಿಸಬೇಕಾಗುತ್ತದೆ. ಉದ್ಯಮಕ್ಕೆ ಕಟ್ಟಡ ಇದೆಯೆ? ಅದು ಸ್ವಂತದ್ದೆ? ಬಾಡಿಗೆಯದೆ? ಬಾಡಿಗೆಯದಾದರೆ ಸಮರ್ಪಕ ಕರಾರು ಪತ್ರವಿದೆಯೆಂದು ಪರಿಯೋಜನಾ ವರದಿ ತಿಳಿಸುತ್ತದೆಯೆ? ಕಟ್ಟಡವನ್ನು ಹೊಸದಾಗಿ ಕಟ್ಟಬೇಕಾದಲ್ಲಿ ಅದಕ್ಕೆ ಬೇಕಾದ ಎಲ್ಲ ಪರವಾನಗಿ, ಅನುಮತಿಗಳು ದೊರತಿವೆಯೆ? ಇವೆಲ್ಲವನ್ನೂ ಗಮನಿಸಬೇಕಾಗುತ್ತದೆ. ಅಲ್ಲದೆ ಕಟ್ಟಡದ ಒಟ್ಟಾರೆ ವಿಸ್ತೀರ್ಣ ಉದ್ಯಮಕ್ಕೆ ಸಾಕೆ? ಇಲ್ಲಿ ಕೈಗಾರಿಕೆಯೊಂದು ಸ್ಥಾಪಿತವಾಗಲು ಯಾವೆಲ್ಲ ಅಭಿಕರಣಗಳ ಒಪ್ಪಿಗೆ/ಮಂಜೂರಾತಿ ಬೇಕು? ಇವೆಲ್ಲ ದೊರಕಿವೆಯೆ? ಈ ಸಂಗತಿಗಳನ್ನೆಲ್ಲ ಗಮನಿಸಬೇಕು.

ಯಂತ್ರಸ್ಥಾವರ: ಉದ್ಯಮಕ್ಕೆ ಬೇಕಾದ ಎಲ್ಲ ಬಗೆಯ ಯಂತ್ರಸ್ಥಾವರಗಳು ಪರಿಯೋಜನಾ ವರದಿಯಲ್ಲಿ ಪ್ರಸ್ತಾಪಿತವಾಗಿವೆಯೆ? ಹೊಸ ಕೈಗಾರಿಕೆಯಾದಲ್ಲಿ, ಉದ್ಯಮಕ್ಕೆ ಆವಶ್ಯಕವಾದ ಯಂತ್ರಸ್ಥಾವರಗಳನ್ನು ಕೊಳ್ಳಲು ಲಭ್ಯವಿದೆಯೆ? ಅವುಗಳನ್ನು ಒದಗಿಸುವ ಸಂಸ್ಥೆ ಯಾವುದು? ಅವುಗಳ ಗುಣಮಟ್ಟ ಈಗಾಗಲೆ ಪರೀಕ್ಷೆಗೆ ಒಳಪಟ್ಟಿದೆಯೆ? ಅವನ್ನು ಹೊರದೇಶಗಳಿಂದ ತರಿಸಬೇಕಾದಲ್ಲಿ ಅದಕ್ಕೆ ಯುಕ್ತವಾದ ಏರ್ಪಾಡುಗಳಾಗಿವೆಯೆ? ಉದಾಹರಣೆಗೆ ಆಮದು ಪರವಾನಗಿ ದೊರೆತಿದೆಯೆ ಯಂತ್ರಸ್ಥಾವರದ ಪೂರೈಕೆಗೆ ಎಷ್ಟು ಸಮಯ ಹಿಡಿಯುತ್ತದೆ? ಇದನ್ನೆಲ್ಲ ಪರಿಯೋಜನಾ ವರದಿ ಕಾಣಿಸಿದೆಯೆ ಎಂದು ಬ್ಯಾಂಕರ್ ಪರಿಶೀಲಿಸಬೇಕಾಗುತ್ತದೆ. ಅಲ್ಲದೆ ಇದಕ್ಕಾಗಿ ಉದ್ಯಮದ ಒಟ್ಟು ವಿನಿಯೋಜನೆ ಎಷ್ಟು ಎನ್ನುವುದು ನಮೂದಿತವಾಗಿದೆಯೆ ಎನ್ನುವುದನ್ನೂ ಗಮನಿಸಬೇಕಾಗುತ್ತದೆ.

ಅಧೋರಚನೆ: ಉದ್ಯಮ ಹೊಂದಿರುವ/ಹೊಂದಲಿರುವ ಅಧೋರಚನೆ ಕುರಿತಾಗಿ ಪರಿಯೋಜನಾ ವರದಿ ತಿಳಿಸುವುದನ್ನು ಬ್ಯಾಂಕರ್ ಗಮನಿಸಬೇಕು. ವಿದ್ಯುತ್ಪೂರೈಕೆ ಮಂಜೂರಾತಿ, ನೀರು ಪೂರೈಕೆ, ಯೋಗ್ಯ ದಕ್ಷ ಸಿಬ್ಬಂದಿ, ರಾಸಾಯನಿಕ ಉದ್ಯಮಗಳಾದಲ್ಲಿ ಪರಿಸರಕ್ಕೆ ಹಾನಿ ಸಂಭವ ಇದೆಯೆ? ಈ ಕುರಿತು ಸಂಬಂಧಿಸಿದ ಅಭಿಕರಣಗಳ ಪರವಾನಗಿ ದೊರೆತಿದೆಯೆ? ಇವೆಲ್ಲ ಅಂಶಗಳು ಬ್ಯಾಂಕರನ ಗಮನವನ್ನು ಬೇಡುವಂಥವು.

ಕಚ್ಚಾ ಸಾಮಗ್ರಿ: ಪರಿಯೋಜನಾ ವರದಿಯಲ್ಲಿ ಕಚ್ಚಾಸಾಮಗ್ರಿಕುರಿತು ಮಾಹಿತಿ ಇರುವುದುಅತ್ಯಂತ ಅವಶ್ಯವಾದುದು. ಅದರ ಆಕರ ಎಲ್ಲಿ? ಸ್ಥಳೀಯವಾಗಿ ಲಭ್ಯವೆ? ದೂರದಿಂದ ಸರಬರಾಜಾಗಬೇಕೆ? ಅಥವಾ ವಿದೇಶದಿಂದ ಆಮದಾಗಬೇಕೆ? ಬೇಕಾದಾಗ ಸಾಕಷ್ಟು ಪ್ರಮಾಣದಲ್ಲಿ ಅದು ಒದಗುವುದೆ? ಯಾವುದಾದರೂ ಅಭಿಕರಣದ ಮೂಲಕ ಅದು ಸರಬರಾಜಾಗಬೇಕೆ? ಅದನ್ನು ಆಮದು ಮಾಡಿಕೊಳ್ಳಬೇಕಾಗಿದ್ದಲ್ಲಿ ಅದಕ್ಕೆ ರಿಸರ್ವ್ ಬ್ಯಾಂಕಿನ ಅನುಮತಿ ಇದೆಯೆ? ಈ ಅಂಶಗಳನ್ನು ಕುರಿತ ಸಮರ್ಪಕ ಮಾಹಿತಿ ಪರಿಯೋಜನಾ ವರದಿಯಲ್ಲಿ ನಿರೂಪಿತವಾಗಿದೆಯೆ ಎಂದು ಬ್ಯಾಂಕರ್ ನೋಡಬೇಕಾಗುತ್ತದೆ.

ಉತ್ಪಾದನ ವಿಧಾನ: ಕಚ್ಚಾ ಸಾಮಗ್ರಿಯನ್ನು ಸಿದ್ಧವಸ್ತುವಾಗಿ ಪರಿವರ್ತಿಸುವವರೆಗೆ ತಳೆಯುವ ವಿವಿಧ ಹಂತಗಳನ್ನು ಪರಿಯೋಜನಾವರದಿ ವಿವರವಾಗಿ ಕಾಣಿಸಿರಬೇಕು. ಈ ವಿಧಾನ ತಕ್ಕಮಟ್ಟಿಗಾದರೂ ದಕ್ಷವಾಗಿದೆಯೆ? ಈ ವಿಧಾನವನ್ನನುಸರಿಸುವುದರಿಂದ ಸಮರ್ಪಕವಾದ ಉತ್ಪಾದಕತೆಸಾಧಿಸೀತೆ? ಇದು ಬಹಳ ಹೊಸ ವಿಧಾನವೆಂದರೆ, ಅದು ರೂಢಿಗತ ವಿಧಾನಗಳಿಗೆ ಸ್ಪರ್ಧಾತ್ಮಕವಾಗಿದೆಯೆ? ತಯಾರಿಕೆಯ ಯಾವುದಾದರೂ ಹಂತಗಳಲ್ಲಿ ಇತರ ಅಭಿಕರಣಗಳನ್ನು ಅವಲಂಬಿಸಬೇಕಾಗುತ್ತದೆಯೆ? ಹಾಗಿದ್ದಲ್ಲಿ ಆ ಅಭಿಕರಣಗಳು ವಿಶ್ವಾಸಾರ್ಹವೆ? ಎಂಬೆಲ್ಲ ಸಂಗತಿಗಳನ್ನು ಗಮನಿಸಬೇಕಾಗುತ್ತದೆ. ಬ್ಯಾಂಕರ್ ಈ ನಿಟ್ಟಿನಲ್ಲಿ ಅನುಭವ ಹೊಂದಿದವನಾದರೆ ಇದರ ಪರಿಶೀಲನೆ ಸುಲಭ.

ಪರಿಯೋಜನಾ ವೆಚ್ಚ: ಪರಿಯೋಜನಾ ವರದಿಯಲ್ಲಿ ಬ್ಯಾಂಕರನ ದೃಷ್ಟಿಯಿಂದ ಇದು ತುಂಬ ಮುಖ್ಯವಾದ ಅಂಶ. ಆದ್ದರಿಂದ ಬ್ಯಾಂಕರ್‌ಇದನ್ನು ತುಂಬ ಜಾಗರೂಕತೆಯಿಂದ ಅಧ್ಯಯನ ಮಾಡಬೇಕಾಗುತ್ತದೆ. ಮೊದಲನೆಯದಾಗಿ, ಉದ್ಯಮ ನೆಲೆಗೊಳ್ಳುವ ವರೆಗೆ ಆಗಬಹುದಾದ ಎಲ್ಲ ರೀತಿಯ ವೆಚ್ಚಗಳೂ ಇದರಲ್ಲಿ ಅಡಕವಾಗಿವೆಯೆ? ಅಕಸ್ಮಾತ್ ಆಗಬಹುದಾದ ಹೆಚ್ಚುವರಿ ಖರ್ಚುಗಳಿಗೆ ಅವಕಾಶವಿದೆಯೆ? ಕಾಣಿಸಿದ ವೆಚ್ಚಗಳು ನೈಜತೆಗೆ ಹತ್ತಿರದಲ್ಲಿವೆಯೆ? ಅಥವಾ ಉತ್ಪ್ರೇಕ್ಷಿತವಾಗಿವೆಯೆ? ಅನೇಕ ಕಾರಣಗಳಿಂದ ಇದು ವಾಸ್ತವಕ್ಕಿಂತ ಭಿನ್ನವಾಗಿರಲು ಸಾಧ್ಯ. ಉದ್ಯಮಿಗೆ ಸ್ವತಃ ಅಷ್ಟಾಗಿ ವೆಚ್ಚದ ಬಗ್ಗೆ ಅರಿವಿಲ್ಲದಿಬರಹುದು, ಉದ್ಯಮದ ಬಗ್ಗೆ ಅಷ್ಟೊಂದು ತಿಳಿವಳಿಕೆ ಇಲ್ಲದವರು ಪರಿಯೋಜನಾ ವರದಿ ತಯಾರಿಸಿರಬಹುದು. ಇಂಥ ಸಂದರ್ಭಗಳನ್ನು ಬ್ಯಾಂಕರ್ ಪರಿಶೀಲಿಸಬೇಕಾಗುತ್ತದೆ. ಅಲ್ಲದೆ ಈ ವೆಚ್ಚವನ್ನು ಸರಿದೂಗಿಸಲು ಮಾಡಲಾಗಿರುವ ಏರ್ಪಾಡುಗಳನ್ನು ಸಹ ಗಮನಿಸಬೇಕಾಗುತ್ತದೆ. ಸಾಮಾನ್ಯವಾಗಿ ಉದ್ಯಮಿಯ ಸ್ವಂತ ಹಣ, ಸಂಬಂಧಿಗಳು/ಸ್ನೇಹಿತರು ನೀಡುವ ದೀರ್ಘಾವಧಿ ಸಾಲ ಹಾಗೂ ಬ್ಯಾಂಕಿನಿಂದ ಕೋರಿರುವ ಸಾಲ—ಹೀಗೆ ಇದು ಮೂರು ಭಾಗಗಳಿರುತ್ತದೆ. ಇದರಲ್ಲಿ ಸಂಬಂಧಿಗಳು/ಸ್ನೇಹಿತರು ನೀಡುವ ಸಾಲ ನಿಜವಾಗಿ ದೀರ್ಘಾವಧಿಯದೇ ಎಂಬುದು ಬ್ಯಾಂಕರ್ ಖಚಿತಪಡಿಸಿಕೊಳ್ಳಬೇಕಾದ ಅಂಶ. ಅಲ್ಲದೆ ಇದು ಬ್ಯಾಂಕರನಿಗೆ ಪರಿಚಿತವಾದ ಉದ್ಯಮವಾದರೆ ತನ್ನ ಅನುಭವದ ಹಿನ್ನೆಲೆಯಲ್ಲಿ ಪ್ರಸಕ್ತ ಪರಿಯೋಜನಾ ವೆಚ್ಚ ಸರಿಹೋಲಿಕೆಯಲ್ಲಿದೆಯೋ ಎಂಬುದನ್ನೂ ಬ್ಯಾಂಕರ್ ಗಮನಿಸಬೇಕಾಗುತ್ತದೆ.

ಮಾರುಕಟ್ಟೆ: ಸಾಮಾನ್ಯವಾಗಿ ಎಲ್ಲ ಪರಿಯೋಜನಾ ವರದಿಗಳೂ ಉತ್ಪನ್ನಕ್ಕಿರುವ ಮಾರುಕಟ್ಟೆಯ ಅಷ್ಟಿಷ್ಟು ಉತ್ಪ್ರೇಕ್ಷೆಯನ್ನೊಳಗೊಂಡಿರುತ್ತದೆ. ಇದನ್ನು ಬ್ಯಾಂಕರ್ ಸದಾ ತನ್ನ ಗಮನದಲ್ಲಿರಿಸಿಕೊಂಡಿರಬೇಕು. ವಾಸ್ತವತೆಗೆ ಮಾರಾಟದ ಪ್ರಕ್ಷೇಪಣ ಎಷ್ಟರ ಮಟ್ಟಿಗೆ ಹತ್ತಿರವಾಗಿದೆ ಎಂದು ವಿಶೇಷವಾಗಿ ಹೊಸ ಘಟಕಗಳ ಕುರಿತಂತೆ ಬ್ಯಾಂಕರ್ ಗಮನಿಸಬೇಕು. ಅಲ್ಲದೆ ಬ್ಯಾಂಕರ್ ತನ್ನಲ್ಲಿರುವ ದತ್ತಾಂಶದಿಂದ ಪ್ರಸ್ತುತ ಉತ್ಪನ್ನಕ್ಕಿರುವ ಮಾರುಕಟ್ಟೆಯ ವಿಸ್ತಾರವನ್ನು ಗುರುತಿಸಿಕೊಂಡು ಘಟಕಕ್ಕೆ ಎಷ್ಟರಮಟ್ಟಿಗಿನ ಅವಕಾಶವಿದೆ ಎಂಬುದನ್ನು ಅಂದಾಜು ಮಾಡಬೇಕಾಗುತ್ತದೆ. ಇದು ಸುಲಭವಾದ ಕೆಲಸವೇನೂ ಅಲ್ಲ. ಇದಕ್ಕಾಗಿ ಬ್ಯಾಂಕರ್ ಮಾರುಕಟ್ಟೆಯನ್ನು ಕುರಿತು ಮಾಹಿತಿಯನ್ನು ಸದಾ ಸಂಗ್ರಹಿಸುತ್ತ, ವಿಶ್ಲೇಶಿಸುತ್ತಿದ್ದು ನಿರ್ಧಾರಗಳಿಗೆ ಬರಬೇಕಾಗುತ್ತದೆ. ಜೊತೆಗೆ ಈ ಉದ್ಯಮದ ಉತ್ಪನ್ನದ ಬೆಲೆ ಮಾರುಕಟ್ಟೆಯಲ್ಲಿ ಸ್ಪರ್ಧಾತ್ಮಕವಾಗಿದೆಯೆ? ಬೆಲೆಯನ್ನು ಕುರಿತಂತೆ ತೀವ್ರ ಪೈಪೋಟಿ ಉಂಟಾಗುವ ವಾತಾವರಣ ಇದೆಯೆ? ಸ್ಪರ್ಧೆಯನ್ನೆದುರಿಸಲು ಘಟಕಕ್ಕೆ ಇರುವ ಸಾಮರ್ಥ್ಯವೇನು? ಇದನ್ನೆಲ್ಲ ಪರಿಯೋಜನಾ ವರದಿಯ ಅಧ್ಯಯನದಿಂದ ಬ್ಯಾಂಕರ್ ಅರಿಯಬೇಕಾಗುತ್ತದೆ.

ಸಮಾದಾಯ ವೆಚ್ಚಸ್ಥಿತಿ ಬಿಂದು—ಸಮಸ್ಥಿಬಿಂದು: ವಿಶೇಷವಾಗಿ ಹೆಚ್ಚಿನ ಪ್ರಮಾಣದ ಬಂಡವಾಳ ಬೇಡುವ ಉದ್ಯಮವನ್ನು ಕುರಿತ ಪರಿಯೋಜನಾ ವರದಿಯಲ್ಲಿ ಇದು ಪ್ರಸ್ತಾಪಿತವಾಗಿರಲೇಬೇಕು. ಉತ್ಪಾದನೆಯ ಯಾವ ಮಟ್ಟದಲ್ಲಿ ಆದಾಯ ವೆಚ್ಚಗಳು ಸರಿಸಮನಾಗುವುವೆಂಬುದು ಪರಿಶೀಲನಾರ್ಹ ಅಂಶವಾಗುತ್ತದೆ. ಏಕೆಂದರೆ ಇದು ಉತ್ಪಾದನೆಯ ಕನಿಷ್ಠ ಮಟ್ಟವನ್ನು ಸೂಚಿಸುತ್ತ, ಉದ್ಯಮದ ಹಿತದೃಷ್ಟಿಯಿಂದ ಉತ್ಪಾದನೆ ಯಾವ ಸಂದರ್ಭದಲ್ಲಿಯೂ ಇದಕ್ಕಿಂತ ಕಡಿಮೆ ಇರಬಾರದೆಂದು ವಿಧಿಸುತ್ತದೆ. ಪರಿಯೋಜನಾವರದಿಯಲ್ಲಿ ಇದು ನಿರೂಪಿತವಾಗಿದೆಯೆ? ಘಟಕ ಸಮಸ್ಥಿಯನ್ನು ಸದಾ ಸಾಧಿಸಲು ಸಾಧ್ಯವೆ? ಎಂಬೆಲ್ಲ ಅಂಶಗಳನ್ನು ಬ್ಯಾಂಕರ್ ಗಮನಿಸಬೇಕಾಗುತ್ತದೆ.

ದುಡಿಯುವ ಬಂಡವಾಳ, ಉತ್ಪಾದನ ಚಕ್ರ; ನಗದು—ಕಚ್ಚಾಸಾಮಗ್ರಿ—ಅರೆಸಿದ್ಧವಸ್ತು—ಸಿದ್ಧ

ವಸ್ತು–ನಗದು ಈ ಸರಣಿಯನ್ನು ಉತ್ಪಾದನ ಚಕ್ರ ಎಂದು ಕರೆಯಲಾಗುತ್ತದೆ. ಪರಿಯೋಜನಾ ವರದಿಯಲ್ಲಿ ಇದರ ಬಗ್ಗೆ ಉಲ್ಲೇಖವಿದ್ದು, ಅವಧಿ ಸೂಚಿತವಾಗಿದ್ದರೆ ಒಳ್ಳೆಯದು. ನಗದು ಪುನಃ ನಗದಾಗಿ—ಲಾಭದೊಡನೆ—ದೊರೆಯುವತನಕ ಉದ್ಯಮಕ್ಕೆ ಆವಶ್ಯಕವಿರುವ ಬಂಡವಾಳಕ್ಕೆ ದುಡಿಯುವ ಬಂಡವಾಳ ಎಂದು ಕರೆಯಲಾಗುತ್ತದೆ. ಇಲ್ಲಿ ಕಚ್ಚಾ ಪದಾರ್ಥದ ಸಂಚಯನ, ತಯಾರಿಕೆಯ ಅವಧಿ, ಸಿದ್ಧವಸ್ತು ಸರಬರಾಜಾದ ಅನಂತರದ ಅವಧಿ, ಒಟ್ಟು ಈ ಸಮಯದಲ್ಲಿನ ಇತರ ವೆಚ್ಚಗಳು ಇವೆಲ್ಲ ಸೇರಿ ದುಡಿಯುವ ಬಂಡವಾಳವಾಗುತ್ತದೆ. ಪರಿಯೋಜನಾ ವರದಿಯಲ್ಲಿ ಈ ಅಂಶಗಳೆಲ್ಲ ವಾಸ್ತವ ನೆಲೆಯಲ್ಲಿ ನಿರೂಪಿತವಾಗಿದ್ದು, ದುಡಿಯುವ ಬಂಡವಾಳ ಆವಶ್ಯಕತೆಗೆ ಅನುಗುಣವಾಗಿ ಪ್ರಕ್ಷೇಪಿತವಾಗಿದೆಯೆ ಎಂದು ಬ್ಯಾಂಕರ್ ಗಮನಿಸಬೇಕಾಗುತ್ತದೆ. ಹೆಚ್ಚು ದಕ್ಷವಾದ ಉತ್ಪಾದನ ಚಕ್ರಕ್ಕೆ ಕಡಿಮೆ ದುಡಿಯುವ ಬಂಡವಾಳ ಸಾಕು ಎಂಬ ಅಂಶ ಸದಾ ಬ್ಯಾಂಕರನ ಕಣ್ಣ ಮುಂದಿರಬೇಕು. ಒಟ್ಟಾರೆ, ಬ್ಯಾಂಕರ್ ಹಾಗೂ ಉದ್ಯಮ ಘಟಕಗಳ ಹಿತದೃಷ್ಟಿಯಿಂದ, ಉದ್ಯಮದಲ್ಲಿ ಅಗತ್ಯವಿದ್ದಷ್ಟು ಹಣವನ್ನು ಮಾತ್ರ ತೊಡಗಿಸಬೇಕು ಎಂಬ ದೃಷ್ಟಿ ಪರಿಯೋಜನಾ ವರದಿಯ ಅಧ್ಯಯನ ವೇಳೆಯಲ್ಲಿ ಬ್ಯಾಂಕರನಿಗಿರಬೇಕು.

ಈ ಅಂಶಗಳಲ್ಲದೆ, ಹಿಂದಿನ ಕೆಲವು ವರ್ಷಗಳ ಹಣಕಾಸು ತಃಖ್ತೆಗಳನ್ನೂ, ಮುಂದಿನ ವರ್ಷಗಳ ಪ್ರಕ್ಷೇಪಿತ ಹಣಕಾಸು ತಃಖ್ತೆಗಳನ್ನೂ, ನಿಧಿ ಹರಿವು ತಃಖ್ತೆಗಳನ್ನೂ ಪರಿಯೋಜನಾ ವರದಿ ನೀಡಬೇಕಾಗುತ್ತದೆ. ಬ್ಯಾಂಕರ್ ಇವನ್ನೂ ಕಣ್ಣಲ್ಲಿ ಕಣ್ಣಿಟ್ಟು ನೋಡಬೇಕಾಗುತ್ತದೆ. ವಿಶೇಷವಾಗಿ ಮಧ್ಯಮಾವಧಿ ಸಾಲದ ಪ್ರಸ್ತಾಪವಿರುವ ಪರಿಯೋಜನಾವರದಿಯಲ್ಲಿ, ಲಾಭದಾಯಕತೆಯ ತಃಖ್ತೆಯಿಂದ ವ್ಯಕ್ತವಾಗುವ ಮರುಪಾವತಿ ಸಾಮರ್ಥ್ಯವನ್ನು ವಿಶ್ಲೇಷಿಸಬೇಕಾಗುತ್ತದೆ. ಹೀಗೆ ಪರಿಯೋಜನಾ ವರದಿಯ ಎಲ್ಲ ಅಂಶಗಳನ್ನೂ ಕೂಲಂಕಷವಾಗಿ ಪರಿಶೀಲಿಸಿದ ಅನಂತರವೇ ಬ್ಯಾಂಕರ್ ಮುಂಗಡ ನೀಡುವ ಬಗ್ಗೆ ನಿರ್ಧಾರ ತಳೆಯಬೇಕು.

ಇಲ್ಲಿ ಪರಿಯೋಜನಾ ವರದಿಯ ಎಲ್ಲ ಅಂಶಗಳನ್ನೂ ಪ್ರಸ್ತಾಪಿಸಿದೆ ಎಂದೇನೂ ಇಲ್ಲ. ಪ್ರತಿಯೊಂದೂ ಉದ್ಯಮಕ್ಕೂ ತನ್ನದೇ ಆದ ವೈಶಿಷ್ಟ್ಯ ಇರುವುದರಿಂದ ಪ್ರತಿಯೊಂದು ಪರಿಯೋಜನಾ ವರದಿಯೂ ವಿಭಿನ್ನವಾಗಿರುತ್ತದೆ. ಆದರಲ್ಲಿ ಅನೇಕ ಹೊಸ ಅಂಶಗಳಿರಬಹುದು. ಬ್ಯಾಂಕರ್ ಆಯಾ ಉದ್ಯಮದ ದೃಷ್ಟಿಯಿಂದ ವರದಿಯನ್ನು ಅಧ್ಯಯನ ಮಾಡಬೇಕಾಗುತ್ತದೆ. ಅಲ್ಲದೆ ಉದ್ಯಮದ ಬೆಳವಣಿಗೆಯಲ್ಲಿ ಪರಿಯೋಜನಾ ವರದಿಯ ಅಧ್ಯಯನ ಕೇವಲ ಮೊದಲ ಹೆಜ್ಜೆ. ಪರಿಯೋಜನಾ ವರದಿ ಎಷ್ಟೇ ಆದರ್ಶಯುತವಾಗಿದ್ದರೂ ವಾಸ್ತವವಾಗಿ ಉದ್ಯಮ ಪ್ರಾರಂಭವಾಗಿ, ಮುಂದುವರಿಯುವ ಕಾಲದಲ್ಲಿ ಎಷ್ಟೋ ಹೊಸ ಸಮಸ್ಯೆಗಳು ಉದ್ಭವವಾಗಬಹುದು. ಪರಿಯೋಜನಾ ವರದಿಯ ಮಿತಿಯನ್ನು ಇದು ಸೂಚಿಸಿದರೂ ಅದರ ಅಧ್ಯಯನದ ಪ್ರಾಮುಖ್ಯ ಕಡಿಮೆಯೇನೂ ಅಲ್ಲ. ತುಂಬ ಸಾಮಾನ್ಯವಾಗಿ ಪರಿಯೋಜನಾ ವರದಿಯಲ್ಲಿ ಕಾಣಬರುವ ಕೆಲವು ಅಂಶಗಳನ್ನು ಪ್ರಸ್ತಾಪಿಸುವುದು ಮಾತ್ರ ಈ ಲೇಖನದ ಉದ್ದೇಶ. ಬ್ಯಾಂಕರ್ ತನ್ನ ಭಾವೀ ಗ್ರಾಹಕನ, ಹೊಸ ಉದ್ಯಮದ ಪರಿಚಯ ಪಡೆಯಲು, ಸಂಬಂಧ ಬೆಳೆಸಲು ಪ್ರಥಮ ಸಾಧನವಾಗಿ ಮಾತ್ರ ಈ ವರದಿಯನ್ನು ಬಳಸಬಹುದು. ●

# ಭಾರತದ ಉದರಿ ದರ್ಜೆ ಮಾಹಿತಿ ಸೇವಾ ಸಂಸ್ಥೆ

**ಒಳ್ಳೆಯ ಸಂಸ್ಥೆಗಳಲ್ಲಿ ಹಣ ತೊಡಗಿಸಲು ಹಲವರು ಮುಂದೆ ಬರುತ್ತಾರೆ. ತೊಡಗಿಸಿದ ಹಣಕ್ಕೆ ನಷ್ಟವಿಲ್ಲ ; ಲಾಭದ ಸಾಧ್ಯತೆ ಅಧಿಕ. ಕೆಲವು ಸಂಸ್ಥೆಗಳ ಉದ್ಯಮಗಳು ನಷ್ಟಸಂಭಾವ್ಯತೆಯಿಂದ ಕೂಡಿದ್ದರೂ ಅವುಗಳಲ್ಲಿ ಹಣ ತೊಡಗಿಸಿ, ಅಕಸ್ಮಾತ್ ಅವು ಮಹಾಯಶಸ್ಸು ಗಳಿಸಿದರೆ ಹೆಚ್ಚು ಲಾಭ ಪಡೆಯುವ ಸಾಹಸಿಗಳೂ ಇದ್ದಾರೆ. ಆದರೆ ಆ ಅಪಾಯದ ಭಯವೇ ಬೇಡ ಎನ್ನುವವರಿಗೆ ಯಾವ ಸಂಸ್ಥೆ ಎಷ್ಟು ಗಟ್ಟಿ, ಎಂಥ ಪ್ರತ್ಯಯ ಉಳ್ಳದ್ದು ಎಂಬುದು ಗೊತ್ತಾಗುವುದು ಹೇಗೆ? ಈ ಮಾಹಿತಿ ದೊರಕಿಸಿಕೊಡುವ ವ್ಯವಸ್ಥೆಯೇ ಇಂದು ವಿಕಾಸಗೊಳ್ಳುತ್ತಿದೆ.**


## ಟಿ. ಕೆ. ರಂಗನಾಥ

**ವ್ಯವಸ್ಥಾಪಕರು**
**ಭಾರತೀಯ ಸ್ಟೇಟ್ ಬ್ಯಾಂಕ್, ಚಿಕ್ಕಮಗಳೂರು**


### ಹಿನ್ನೆಲೆ

ಅಂತರರಾಷ್ಟ್ರೀಯ ಹಣಕಾಸು ಮಾರುಕಟ್ಟೆಯಲ್ಲಿ ವಿನಿಯೋಜಕರು ತಾವು ವಿನಿಯೋಜಿಸುವಕಂಪನಿಗಳ ಬಗ್ಗೆ ಮಾಹಿತಿ ಪಡೆಯಬಯಸುವುದು. ಪ್ರಖ್ಯಾತ ಉದರಿ ದರ್ಜೆ (credit rating) ನೀಡುವ ಕಂಪನಿಗಳ ಉದರಿ ದರ್ಜೆಗೆ ಅನುಗುಣವಾಗಿ ನಷ್ಟ ಸಂಭಾವ್ಯತೆ ಲೆಕ್ಕಿಸಿ ಹಣ ತೊಡಗಿಸುವುದಲ್ಲದೇ, ಅದಕ್ಕೆ ತಕ್ಕಂತೆ ಬಡ್ಡಿ ವಿಧಿಸುವುದರಿಂದ ಮಾರುಕಟ್ಟೆ ಪ್ರವೇಶ ಬಯಸುವ ಎಲ್ಲಾ ಸಂಸ್ಥೆಗಳು ಉದರಿ ದರ್ಜೆ ಪಡೆಯುವುದು ಸರ್ವಸಾಮಾನ್ಯ ಸಂಗತಿಯಾಗಿದೆ. ಕೆಲವು ಹಣಕಾಸು ಮಾರುಕಟ್ಟೆಗಳಲ್ಲಿ ಉದರಿ ದರ್ಜೆ ನಿರ್ಣಯವಾದ ಹೊರತು ಮಾರುಕಟ್ಟೆ ಪ್ರವೇಶಿಸುವುದನ್ನೇ ನಿರ್ಬಂಧಿಸಲಾಗಿದೆ. ಕಳೆದ ವರ್ಷ ಅಂತರರಾಷ್ಟ್ರೀಯ ಹಣ ಮಾರುಕಟ್ಟೆಯಲ್ಲಿ ಪ್ರವೇಶ ಬಯಸುವ ಎಲ್ಲಾ ಸಂಸ್ಥೆಗಳು ತಮ್ಮ ಉದರಿ ದರ್ಜೆ ನಿಷ್ಕರ್ಷಿಸುವಂತೆ ಸ್ಟ್ಯಾಂಡರ್ಡ್ ಅಂಡ್ ಪೂರ್ ಕಾರ್ಪೊರೇಷನ್ ಮತ್ತು ಮೂಡಿಸ್ ಇನ್‌ವೆಸ್ಟರ್ ಸರ್ವಿಸ್ ಸಂಸ್ಥೆಗಳನ್ನು ಕೇಳಿಕೊಂಡದ್ದನ್ನು ಪತ್ರಿಕೆಯಲ್ಲಿ ಓದಿರಬಹುದು.

ಅಂತರರಾಷ್ಟ್ರೀಯ ಹಣ ಮಾರುಕಟ್ಟೆಗೆ ಹೋಲಿಸಿದರೆ ಭಾರತದ ಹಣಕಾಸು ಮಾರುಕಟ್ಟೆ ಇನ್ನೂ ಶೈಶವಾವಸ್ಥೆಯಲ್ಲಿದೆಯೆಂದೇ ಹೇಳಬಹುದು. 80ರ ದಶಕದಲ್ಲಿ ವಿನಿಯೋಜಕರ ಸಂಖ್ಯೆ ಬಹಳಷ್ಟು ಹೆಚ್ಚಿದೆ. ಮೊಟ್ಟಮೊದಲ ಬಾರಿಗೆ ಮಧ್ಯಮ ಹಾಗೂ ಕೆಳ ಆದಾಯ ವರ್ಗದ ನೌಕರ ವರ್ಗಕ್ಕೆ ಸೇರಿದ ಲಕ್ಷಾಂತರ ಮಂದಿ ನೇರವಾಗಿ ಬಂಡವಾಳ ಪತ್ರಗಳಲ್ಲಿ ಹಣ ತೊಡಗಿಸಿದ್ದಾರೆ. ಅವರಲ್ಲಿ ಬಹುಪಾಲು ಮಂದಿ ಈ ವ್ಯವಹಾರದ ಆಳ-ಈಳ ಅರಿಯದವರು. ಷೇರು ವ್ಯವಹಾರ ಸಟ್ಟಾ ವ್ಯಾಪಾರಕ್ಕಿಂತ ಭಿನ್ನವೇನೂ ಅಲ್ಲ ಎಂದು ಇಂದೂ ಕೆಲವರು ಭಾವಿಸಿದ್ದಾರೆ. ಬೆಳಗಾಗುವುದರೊಳಗೆ ಲಕ್ಷಾಧಿಪತಿಗಳಾಗುವ ಕನಸು ನನಸಾಗುವುದೆಂಬ ಹಂಬಲ ಉಳ್ಳವರು ಹಲವರು. ಈ ಕನಸಿಗರ ಬೆಂಬಲದಿಂದ ಆದಷ್ಟು ಹಣ ಸಂಗ್ರಹಿಸುವ, ರಾತ್ರಿ ಬಾಗಿಲು ತೆರೆದು ಬೆಳಗಾಗುವಷ್ಟರಲ್ಲಿ ಅಂಗಡಿ ಮುಚ್ಚುವ ಕಂಪನಿಗಳ, ಮಾಳಿಗೆಯ ಮೇಲೆ ನಿಂತು ದೊಡ್ಡ ದನಿಯಲ್ಲಿ ಆಕರ್ಷಕ ಜಾಹೀರಾತುಗಳೊಂದಿಗೆ ಕನಸಿನ ಲೋಕವನ್ನು ವಿವರಿಸುವ

ಉದ್ಯಮ ಪ್ರವರ್ತಕರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚುತ್ತಿದೆ. ಅವರ ಗಮನ ವಿನಿಯೋಜಕರ ಜೇಬಿನಲ್ಲಿರುವ ಹಣದ ಗಂಟಿನತ್ತಲೇ. ಬಂಡವಾಳ ಮಾರುಕಟ್ಟೆಯ ಒಳ ಒತ್ತಡಗಳ, ಅದರ ಚೂಪುಗಾರಿಕೆಯ, ಸಂಸ್ಥೆಯ ವ್ಯವಸ್ಥಾಪನ ವರ್ಗದ, ಆರ್ಥಿಕ ಬಲದ ವಿಶ್ಲೇಷಣಗಳ ಆಧಾರದ ಮೇಲೆ ನಿರ್ಧರಿಸಿದ ಉದರಿ ದರ್ಜೆ, ವಿನಿಯೋಜಕರಿಗೆ ಮಾರ್ಗದರ್ಶಿಯಾಗುವುದೆಂಬುದು ಎಲ್ಲರೂ ಒಪ್ಪತಕ್ಕ ವಿಷಯ. ಆದರೆ ಈ ವಿಶ್ಲೇಷಣೆ ಕೈಗೊಳ್ಳುವರಾರು? ಇದಕ್ಕೆ ಉತ್ತರವಾಗಿ 1987ರಲ್ಲಿ ಭಾರತದ ಉದರಿ ದರ್ಜೆ ಮಾಹಿತಿ ಸೇವಾ (ಭಾಉಮಾಸೇ) ಸಂಸ್ಥೆ ಜನ್ಮತಾಳಿತು.

## ಸ್ವರೂಪ

ಭಾಉಮಾಸೇ ಯುನಿಟ್ ಟ್ರಸ್ಟ್ ಆಫ್ ಇಂಡಿಯಾ ಹಾಗೂ ಭಾರತದ ಕೈಗಾರಿಕಾ ಉದರಿ ವಿನಿಯೋಜನಾ ನಿಗಮಗಳಿಂದ ಪ್ರವರ್ತಿಸಲ್ಪಟ್ಟ ಒಂದು ನೋಂದಾಯಿತ ಕಂಪನಿ. ಈ ಕಂಪನಿಯ ಇತರ ಷೇರುದಾರರೆಂದರೆ ಏಷ್ಯಾ ಅಭಿವೃದ್ಧಿ ಬ್ಯಾಂಕ್, ಭಾರತೀಯ ಸ್ಟೇಟ್ ಬ್ಯಾಂಕ್, ಜೀವ ವಿಮಾ ನಿಗಮ, ಸಾಮಾನ್ಯ ವಿಮಾ ನಿಗಮ, ವಸತಿ ಅಭಿವೃದ್ಧಿ ಹಣಕಾಸು ನಿಗಮ, ಸ್ಟ್ಯಾಂಡರ್ಡ್ ಚಾರ್ಟರ್ಡ್ ಬ್ಯಾಂಕ್, ಮಿತ್ಸುಇ ಬ್ಯಾಂಕ್, ಬ್ಯಾಂಕ್ ಆಫ್ ಟೋಕಿಯೋ, ಹಾಂಕಾಂಗ್ ಅಂಡ್ ಷಾಂಗೈ ಬ್ಯಾಂಕಿಂಗ್ ಕಾರ್ಪೋರೇಷನ್, ಸಿಟಿ ಬ್ಯಾಂಕ್, ಎ ಎನ್ ಜಡ್ ಬ್ಯಾಂಕ್, ಡಾಯಿಷ್ ಬ್ಯಾಂಕ್, ಸೊಸೈಟಿ ಜನರಲ್ ಬ್ಯಾಂಕ್, ನ್ಯಾಷನಲ್ ಡಿ ಪ್ಯಾರಿಸ್, ಬ್ಯಾಂಕ್ ಆಫ್ ಇಂಡಿಯ, ಬ್ಯಾಂಕ್ ಆಫ್ ಬರೋಡ, ಅಲಹಬಾದ್ ಬ್ಯಾಂಕ್, ಇಂಡಿಯನ್ ಓವರ್‌ಸೀಸ್ ಬ್ಯಾಂಕ್, ವೈಶ್ಯ ಬ್ಯಾಂಕ್ ಮತ್ತು ಬ್ಯಾಂಕ್ ಆಫ್ ಮಧುರ.

ಭಾಉಮಾಸೇ ಕಂಪನಿಯೊಂದರ ಅಪೇಕ್ಷೆಯ ಮೇರೆಗೆ ಅದರ ನಿರ್ದಿಷ್ಟ ಸಂಲೇಖದ ಉದರಿ ದರ್ಜೆಯನ್ನು ನಿರ್ಧರಿಸುತ್ತದೆ. ಉದರಿ ದರ್ಜೆ ನಿರ್ಧಾರಣ ಜವಾಬ್ದಾರಿಯನ್ನು ಪ್ರತ್ಯೇಕ ವಿಶ್ಲೇಷಣಾ ತಂಡಕ್ಕೆ ಸಂಸ್ಥೆ ವಹಿಸುತ್ತದೆ. ವಿಶ್ಲೇಷಣಾ ತಂಡ ಕಂಪನಿಯ ಅಧಿಕಾರ ವರ್ಗದೊಂದಿಗೆ ಚರ್ಚಿಸಿ ಮಾಹಿತಿ ಸಂಗ್ರಹಿಸುವುದರ ಜೊತೆಗೆ ಸಂಬಂಧಿಸಿದ ಕೈಗಾರಿಕೆಯ ಬಗೆಗಿನ ಮಾಹಿತಿಯನ್ನು ಕೂಡಿಸಿ ದರ್ಜೆ ನೀಡಿಕೆ ಸಮಿತಿಗೆ ತನ್ನ ನಿರ್ಧಾರವನ್ನು ತಿಳಿಸುತ್ತದೆ. ಈ ಸಮಿತಿಯ ಸದಸ್ಯರು ಭಾಉಮಾಸೇಯ ನಿರ್ದೇಶಕರಾಗಿದ್ದು ಆದರೆ ಷೇರುದಾರರನ್ನು ಪ್ರತಿನಿಧಿಸುವವರು ಆಗಿರುವುದಿಲ್ಲ. ಸಂಸ್ಥೆಗೆ ನೀಡಿದ ಮಾಹಿತಿಯನ್ನು ಗೋಪ್ಯವಾಗಿ ಇಡಲಾಗುತ್ತದೆ. ನಿರ್ದೇಶನ ಮಂಡಳಿಗೆ ಯಾವ ಸಂಸ್ಥೆಯ/ಸಂಲೇಖದ ಬಗ್ಗೆ ಉದರಿ ದರ್ಜೆ ನೀಡುವ ಕೆಲಸ ನಡೆಯುತ್ತಿದೆ ಎಂಬುದನ್ನು ತಿಳಿಸುವುದಿಲ್ಲ. ದರ್ಜೆ ನೀಡಿಕೆ ಸಮಿತಿ ನೀಡಿದ ದರ್ಜೆಯನ್ನು ಅರ್ಜಿದಾರ ಕಂಪನಿಗೆ ತಿಳಿಸಿದ ನಂತರ ತನ್ನ ದರ್ಜೆಯನ್ನು ಉತ್ತಮಪಡಿಸಿಕೊಳ್ಳಲು ಹೆಚ್ಚಿನ ಮಾಹಿತಿ ಒದಗಿಸಲು ಕಂಪನಿಗೆ ಅವಕಾಶವಿದೆ. ಭಾಉಮಾಸೇ ನೀಡುವ ಉದರಿ ದರ್ಜೆ ಋಣಸಂಲೇಖ ಪೂರ್ಣವಾಗಿ ಪಾವತಿಯಾಗುವವರೆಗೆ ಚಾಲ್ತಿಯಲ್ಲಿರುವುದರಿಂದ ಕಂಪನಿಯ ಬಗೆಗಿನ ಎಲ್ಲಾ ಬೆಳವಣಿಗೆಗಳ ಪೂರ್ಣ ಮಾಹಿತಿಯನ್ನು ಸಂಸ್ಥೆಗೆ ಕಂಪನಿ ಸಲ್ಲಿಸಬೇಕಲ್ಲದೆ ಅದಕ್ಕೆ ವಿಧಿಸುವ ಶುಲ್ಕವನ್ನು ನೀಡಬೇಕು.

ಯಾವುದೇ ಬೆಳವಣಿಗೆಯಿಂದಾಗಿ ಉದರಿದರ್ಜೆ ಬದಲಿಸ ಬಯಸಿದರೆ ಅದನ್ನು ಪ್ರಚಲಿಸುವ ಹೊಣೆ ಭಾಉಮಾಸೇಯದೇ ಆಗಿದೆ. ಉದರಿದರ್ಜೆ ಪಡೆಯ ಬಯಸುವ ಕಂಪನಿಗಳು ಭಾಉಮಾಸೇಗೆ ನೀಡುವ ಶುಲ್ಕ ಎರಡು ತೆರದ್ದು. ಮೊದಲನೆಯದು ಮೂಲ ಉದರಿದರ್ಜೆ ನಿರ್ಧಾರಣ ಶುಲ್ಕ ಹಾಗೂ ವಾರ್ಷಿಕ ಕಣ್ಗಾವಲು ಶುಲ್ಕ. ಶುಲ್ಕ ಪ್ರತಿ ಸಂಲೇಖಕ್ಕೂ ಬೇರೆಬೇರೆಯಾಗಿದ್ದು ಕನಿಷ್ಠ ಹಾಗೂ ಗರಿಷ್ಠ ಮಿತಿಗೆ ಒಳಪಟ್ಟಿದೆ.

## ಉದರಿ ದರ್ಜೆಗಳ ಪರಿಚಯ

ಭಾಉಮಾಸೇ ಪ್ರಸ್ತುತ ಯಾವುದೇ ಕಂಪನಿಯ ಎಲ್ಲಾ ಸಂಲೇಖಗಳಿಗೂ ಒಂದೇ ಉದರಿ ದರ್ಜೆ ನೀಡುವುದಿಲ್ಲ. ಸಾಲಪತ್ರಗಳು, ಸಾವಧಿ ಠೇವಣಿಗಳು, ಹಾಗೂ ಕಿರುಅವಧಿಯ ಸಂಲೇಖಗಳಿಗೆ ಮಾತ್ರ ಉದರಿದರ್ಜೆ ನೀಡುತ್ತದೆ. ಯಾವುದೇ ಒಂದು ಬಗೆಯ ಸಂಲೇಖಕ್ಕೆ ನೀಡಿದ ಉದರಿದರ್ಜೆಯನ್ನು ಮತ್ತೊಂದು ಸಂಲೇಖಕ್ಕೆ ಬಳಸಲಾಗದು. ಏಕೆಂದರೆ ಭಾಉಮಾಸೇ ಸಂಲೇಖವೊಂದಕ್ಕೆ ಉದರಿ ದರ್ಜೆ ನೀಡುವಾಗ ಪರಿಗಣಿಸುವ ಪ್ರಾಚಲಗಳು ಬೇರೆಯವು. ಉದರಿದರ್ಜೆ ಪಡೆದ ಕಂಪನಿಯೊಂದು ಅದನ್ನು ಕಡ್ಡಾಯವಾಗಿ ಪ್ರಕಟಿಸಬೇಕೆಂದೇನೂ ಇಲ್ಲ. ಸಂಲೇಖವೊಂದರಲ್ಲಿ ಹಣ ತೊಡಗಿಸಲು ವಿನಿಯೋಜಕನಿಗೆ ಮಾಡಿದ ಶಿಫಾರಸು ಎಂದು ಉದರಿದರ್ಜೆಯನ್ನು ಪರಿಗಣಿಸಲಾಗದು. ಉದರಿ ದರ್ಜೆ ಸಂಕೇತಗಳು ಸಾಲಪತ್ರ/ಠೇವಣಿ/ಆದ್ಯತಾ ಷೇರುಗಳ ಅಸಲು/ಬಡ್ಡಿ/ಲಾಭಾಂಶ/ಸಕಾಲಿಕ ಪಾವತಿಯ ಬಗೆಗಿನ ಭಾಉಮಾಸೇಯ ಅಭಿಪ್ರಾಯದ ಸಾರಾಂಶದ ಸಂಕೇತ ಎಂದು ಮಾತ್ರ ಪರಿಗಣಿಸಬೇಕು.

ಒಂದೇ ಉದರಿದರ್ಜೆ ಪಡೆದ ಬೇರೆಬೇರೆ ಕಂಪನಿಯ ಎರಡು ಸಂಲೇಖಗಳು ಒಂದೇ ವಿನಿಯೋಜನಾ ಗುಣದ್ದು ಎಂದು ಹೇಳಲು ಆಗುವುದಿಲ್ಲವಾದರೂ ಅವು ಒಂದೇ ಗಣಕ್ಕೆ ಸೇರಿದವು ಎಂಬುದು ಸತ್ಯಕ್ಕೆ ಸಮೀಪವಾದುದು.

## ಸಾಲ ಪತ್ರದ ಉದರಿ ದರ್ಜೆ ಸೂಚಕಗಳು

ಸಾಲ ಪತ್ರಗಳನ್ನು ಮೂರು ಮುಖ್ಯ ವಿಭಾಗಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ ಉತ್ತಮ ವಿನಿಯೋಜನವರ್ಗ, ವಿನಿಯೋಜನವರ್ಗ, ಸಟ್ಟಾ ವರ್ಗ. ಉತ್ತಮ ವಿನಿಯೋಜನ ವರ್ಗದಲ್ಲಿ AAA-ಅತ್ಯುತ್ತಮ ಸುರಕ್ಷತೆ, AA—ಉತ್ತಮ ಸುರಕ್ಷತೆ ಎಂಬ ಉಪವಿಭಾಗಗಳು, ವಿನಿಯೋಜನ ವರ್ಗದಲ್ಲಿ A-ಸಾಕಷ್ಟು ಸುರಕ್ಷತೆ, BBB ಸಾಧಾರಣ ಸುರಕ್ಷತೆ ಎಂಬ ಎರಡು ಉಪವಿಭಾಗಗಳು, ಸಟ್ಟಾ ವಿನಿಯೋಜನ ವರ್ಗದಲ್ಲಿ BB ಸಾಕಷ್ಟಿಲ್ಲದ ಸುರಕ್ಷತೆ, B,—ನಷ್ಟಸಂಭಾವ್ಯತೆ ಹೆಚ್ಚು C— ಹೆಚ್ಚು ನಷ್ಟ ಸಂಭಾವ್ಯತೆ ಹಾಗೂ D— ಕಟಬಾಕಿ ಎಂಬ ಉಪ ವಿಭಾಗಗಳಿವೆ. ಎರಡು ಕಂಪನಿಗಳ ಸಂಲೇಖಗಳ ತೌಲನಿಕ ದರ್ಜೆ ತೋರಿಸಲು ಈ ಸಂಕೇತಗಳೊಡನೆ '+' ಹಾಗೂ '—' ಸಂಕೇತಗಳನ್ನೂ ಬಳಸಲಾಗುತ್ತದೆ.

## ಸಾವಧಿ ಠೇವಣಿ ಉದರಿ ದರ್ಜೆ ಸೂಚಕಗಳು

ಸಾವಧಿ ಠೇವಣಿಗಳ ಬಗ್ಗೆ ಭಾಉಮಾಸೇ ಆರು ಉದರಿ ದರ್ಜೆಗಳನ್ನು ನೀಡುತ್ತದೆ. ಅವುಗಳೆಂದರೆ FAAA, FAA, FA, FB, FC, FD. FAAA ಉದರಿ ದರ್ಜೆ ಪಡೆದ ಕಂಪನಿಯ ಸಾವಧಿ ಠೇವಣಿಯ ಮೇಲಣ ಬಡ್ಡಿ ಹಾಗೂ ಅಸಲಿನ ಮರುಪಾವತಿ ಪಕ್ವದಿನದಂದು ದೊರಕುವುದು ನಿಶ್ಚಿತ. FAA ಪಡೆದ ಕಂಪನಿಗಳಲ್ಲಿ ಪಕ್ವದಿನದಂದು ಮರುಪಾವತಿಯಾಗುವ ಬಗ್ಗೆ ಅನುಮಾನವಾದರೂ FAAA ಕಂಪನಿಗಳಷ್ಟು ಖಚಿತತೆ ಇಲ್ಲ. FA ಪಡೆದ ಕಂಪನಿಗಳಲ್ಲಿ ತೊಡಗಿಸಿದ ಸಾವಧಿ ಠೇವಣಿಯ ಪಕ್ವದಿನದಂದು ಮರುಪಾವತಿ ಸಾಧ್ಯತೆ ಸಮರ್ಪಕವಾಗಿದ್ದಾಗ್ಯೂ ಸನ್ನಿವೇಶಗಳ ಬದಲಾವಣೆಯಿಂದಾಗಿ ಮರುಪಾವತಿಯಾಗದಿರುವ ಸಂಭವ ಇದೆ. FB ಉದರಿ ದರ್ಜೆ ಪಡೆದ ಕಂಪನಿಗಳು ಪಕ್ವದಿನದಂದು ಅಸಲು/ಬಡ್ಡಿಯ ಪಾವತಿ ಮಾಡದೇ ಕಟಬಾಕಿದಾರರಾಗುವ ಸಾಧ್ಯತೆ ಇದೆ. FC ಉದರಿ ದರ್ಜೆ ಪಡೆದ ಕಂಪನಿಗಳು ಸಮಯಕ್ಕೆ ಸರಿಯಾಗಿ ಮರುಪಾವತಿ ಮಾಡುವುದು ಅನುಮಾನಾಸ್ಪದ. FD ಸಂಕೇತ ಪಡೆದ ಕಂಪನಿಗಳು ಈಗಾಗಲೇ ಮರುಪಾವತಿ ಮಾಡದೆ ಕಟಬಾಕಿದಾರರಾಗಿದ್ದಾರೆ ಅಥವಾ ಕಟಾಬಾಕಿದಾರರಾಗುತ್ತಾರೆ ಎಂಬುದನ್ನು ಸೂಚಿಸುತ್ತದೆ. ಎರಡು ಕಂಪನಿಗಳ ಸಂಲೇಖಗಳ ನಡುವಣ ತೌಲನಿಕ ದರ್ಜೆ ತೋರಿಸಲು ಈ ಸೂಚಿಗಳೊಡನೆ + ಹಾಗೂ — ಸಂಕೇತಗಳನ್ನು ಬಳಸಲಾಗುತ್ತದೆ.

## ಅಲ್ಪಾವಧಿ ಸಂಲೇಖಗಳು

ಅಲ್ಪಾವಧಿ ಸಂಲೇಖಗಳ ಬಗ್ಗೆ ಭಾಉಮಾಸೇ ಐದು ಬಗೆಯ ಸಂಕೇತಗಳನ್ನು ನೀಡುತ್ತವೆ. ಅವುಗಳೆಂದರೆ :

- P–1 ಪಕ್ವದಿನದಂದು ಪಾವತಿ ಮಾಡುವ ಸಾಧ್ಯತೆ ಅತಿ ಹೆಚ್ಚು.
- P–2 ಪಕ್ವದಿನದಂದು ಪಾವತಿ ಮಾಡುವ ಸಾಧ್ಯತೆ ಉಂಟು. ಆದರೆ P–1ರಷ್ಟಿಲ್ಲ.
- P–3 ಪಕ್ವದಿನದಂದು ಪಾವತಿಯಾಗುವ ಸಾಧ್ಯತೆ ಇರುವುದಾದರೂ ಬದಲಾದ ಸಂದರ್ಭದಲ್ಲಿ ಕಟಬಾಕಿದಾರರಾಗುವುದು ಸಾಧ್ಯ.

P-4 ಪಕ್ವದಿನದಂದು ಪಾವತಿಯಾಗುವ ಸಾಧ್ಯತೆ ಕಡಿಮೆ. ಅಲ್ಪಕಾಲೀನ ಪ್ರತಿಕೂಲ ಸನ್ನಿವೇಶಗಳಿಂದ ಅಥವಾ ಅನುಕೂಲವಲ್ಲದ ಬೆಳವಣಿಗೆಗಳಿಂದ ಕಟಬಾಕಿಯಾಗುವ ಸಾಧ್ಯತೆ ಹೆಚ್ಚು.

P-5 ಪಕ್ವದಿನದಂದು ಪಾವತಿಯಾಗದು ಅಥವಾ ಆಗಲೇ ಕಟಬಾಕಿ ಆಗಿದೆ. ಭಿನ್ನ ಕಂಪನಿಗಳ ಸಂಲೇಖಗಳ ನಡುವಣ ತೌಲನಿಕ ದರ್ಜೆ ತೋರಿಸಲು ಈ ಸಂಕೇತಗಳೊಡನೆ '+' ಹಾಗೂ '—' ಸಂಕೇತವನ್ನೂ ಉಪಯೋಗಿಸಲಾಗುತ್ತದೆ.

ಈ ಮೊದಲೇ ಹೇಳಿದಂತೆ ಒಂದೇ ಕಂಪನಿಯ ವಿವಿಧ ಸಂಲೇಖಗಳು ಬೇರೆಬೇರೆ ಉದರಿ ದರ್ಜೆ ಪಡೆಯಬಹುದು. ಇದಕ್ಕೆ ಕಾರಣ, ಸಂಲೇಖಗಳ ವೈಲಕ್ಷಣ್ಯ ಹಾಗೂ ಅವುಗಳ ಮರುಪಾವತಿಯ ಬೇರೆಬೇರೆ ಕಾಲಮಾನ.

## ವಿಶ್ಲೇಷಣೆಯ ವಿಧಾನಗಳು

ಸಂಲೇಖವೊಂದರ ಉದರಿ ದರ್ಜೆಯನ್ನು ನಿರ್ಧರಿಸುವುದಕ್ಕೆ ಮುನ್ನ ತಂಡವೊಂದು ವಿಶ್ಲೇಷಣೆ ನಡೆಸುವುದೆಂದು ಈ ಮುಂಚೆಯೇ ಹೇಳಿದೆ. ಆ ತಂಡ ಪರಿಗಣಿಸುವ ಮೂಲಭೂತ ಅಂಶಗಳು ಹೀಗಿವೆ:

(ಅ) ವ್ಯವಹಾರ ವಿಶ್ಲೇಷಣೆ

1 ಕೈಗಾರಿಕೆಯ ನಷ್ಟಸಂಭಾವ್ಯತೆ–ಸ್ಪರ್ಧೆಯ ಸ್ವರೂಪ ಮತ್ತು ಪ್ರಕಾರ, ಬೇಡಿಕೆ ಪೂರೈಕೆ ಪರಿಸ್ಥಿತಿ, ಸರಕಾರದ ಧೋರಣೆ, ಕೈಗಾರಿಕೆಯ ಸಂರಚನೆ ಇತ್ಯಾದಿ ;

2 ಸಂಬಂಧಿಸಿದ ಕೈಗಾರಿಕೆಯಲ್ಲಿ ಕಂಪನಿಯ ಮಾರುಕಟ್ಟೆ ಪಾಲು : ಮಾರುಕಟ್ಟೆ ಪಾಲು, ಮಾರಾಟ ಹಾಗೂ ವಿತರಣ ವ್ಯವಸ್ಥೆ, ಸ್ಪರ್ಧಿ ಕಂಪನಿಗೆ ಹೋಲಿಸಿದಾಗ ಇರುವ ಅನುಕೂಲ/ಅನನುಕೂಲಗಳು, ಉತ್ಪನ್ನಹಾಗೂ ಗ್ರಾಹಕ ವೈವಿಧ್ಯ;

3 ನಿರ್ವಹಣಾ ದಕ್ಷತೆ: ಕಾರ್ಮಿಕ ಸಂಬಂಧ, ಸ್ಥಳ ಸಂಬಂಧಿ ಅನುಕೂಲ/ಪ್ರತಿಕೂಲಗಳು, ಸ್ಪರ್ಧಿಗೆ ಹೋಲಿಸಿದಂತೆ ಉತ್ಪಾದನ ದಕ್ಷತೆ ;

4 ಕಾನೂನು ಪರಿಸ್ಥಿತಿ : ವಿವರಣ ಪತ್ರಿಕೆಯ ಷರತ್ತುಗಳು, ನ್ಯಾಸಧಾರಿ ಹಾಗೂ ಅದರ ಜವಾಬ್ದಾರಿ, ಸಕಾಲಿಕ ಪಾವತಿ ಹಾಗೂ ವಂಚನೆ/ಮೋಸಗಳಿಂದ ರಕ್ಷಿಸಲು ಇರುವ ವ್ಯವಸ್ಥೆಯ ಪರಿಶೀಲನೆ.

(ಆ) ವಿತ್ತೀಯ ವಿಶ್ಲೇಷಣೆ

1 ಲೆಕ್ಕಪದ್ಧತಿಯ ಗುಣಮಟ್ಟ : ಪರಿಶೋಧಕರ ಅನಿಸಿಕೆ/ಅಭಿಪ್ರಾಯ/ಟಿಪ್ಪಣಿ, ಲಾಭ-ನಷ್ಟಗಳ ಲೆಕ್ಕಾಚಾರ, ಸವಕಳಿ ನೀತಿ, ದಾಸ್ತಾನು ಬೆಲೆ ನಿರ್ಣಯ, ಆಢಾವೆ ಪಟ್ಟಿಯ ಹೊರಗಣ ಆಸ್ತಿ/ಹೊಣೆಗಳು ;

2 ಆದಾಯ ರಕ್ಷಣೆ : ಲಾಭಪ್ರದತೆಯ ಅನುಪಾತಗಳು, ಭವಿಷ್ಯದಲ್ಲಿ ಆದಾಯದ ಅವಕಾಶಗಳು, ಬೆಳವಣಿಗೆಯ ಗತಿ;

3 ಹಣ ಹರಿವಿನ ಸಮರ್ಪಕತೆ: ಸಾಲ/ಮರುಪಾವತಿ ಹಾಗೂ ದುಡಿಯುವ ಬಂಡವಾಳದ ಅಗತ್ಯಗಳು, ದುಡಿಯುವ ಬಂಡವಾಳದ ವ್ಯವಸ್ಥಾಪನ, ಇತ್ಯಾದಿ.

4 ವಿತ್ತೀಯ ನಮ್ಯತೆ: ಆರ್ಥಿಕ ಒತ್ತಡದ ಸಮಯದಲ್ಲಿ ಪರ್ಯಾಯ ಹಣಕಾಸು ಯೋಜನೆ, ಹಣ ಸಂಗ್ರಹಣಾ ಸಾಮರ್ಥ್ಯ, ಆಸ್ತಿಯ ವಿನಿಯೋಗ ಸಾಮರ್ಥ್ಯ, ಭವಸಾಮರ್ಥ್ಯ ಇತ್ಯಾದಿ.

(ಇ) ವ್ಯವಸ್ಥಾಪನ ಮೌಲ್ಯಮಾಪನ

1 ವ್ಯವಸ್ಥಾಪಕ ವರ್ಗದ ಹಿಂದಿನ ಸಾಧನೆ (ಮಾರ್ಗ ದಾಖಲೆಗಳು), ಯೋಜನಾ ಹಾಗೂ ನಿಯಂತ್ರಣ ವ್ಯವಸ್ಥೆ, ಉತ್ತರಾಧಿಕಾರಿ ಯೋಜನೆ;

2 ಪ್ರತಿಕೂಲ ಸನ್ನಿವೇಶಗಳನ್ನು ಎದುರಿಸುವ ಸಾಮರ್ಥ್ಯದ ಮೌಲ್ಯಮಾಪನ;

3 ಗುರಿ, ತಂತ್ರವ್ಯೂಹ ಮತ್ತು ತಾತ್ವಿಕ ನಿಲುವು.

(ಈ) ವಿನಿಯಮನ ಹಾಗೂ ಸ್ಪರ್ಧಾತ್ಮಕ ಪರಿಸರ, ವಿತ್ತೀಯ ವ್ಯವಸ್ಥೆಯ ಸಂರಚನೆ ಹಾಗೂ ವಿನಿಯಮನದ ಸರಹದ್ದು, ವಿನಿಯಮನ/ಅವಿನಿಯಮನದ ಪ್ರವೃತ್ತಿಗಳು ಹಾಗೂ ಕಂಪನಿಯ ಮೇಲೆ ಅವುಗಳ ಪ್ರಭಾವ.

(ಉ) ಮೂಲಭೂತ ವಿಶ್ಲೇಷಣೆ

ದ್ರವತ್ವ ವ್ಯವಸ್ಥಾಪನ, ಆಸ್ತಿಯ ಗುಣಮಟ್ಟ, ಲಾಭಪ್ರದತೆ ಮತ್ತು ಹಣಕಾಸು ಸ್ಥಿತಿ, ಬಡ್ಡಿ ಹಾಗೂ ತೆರಿಗೆ ವ್ಯತ್ಯಾಸಕ್ಕೆ ಸೂಕ್ಷ್ಮವೇದಿತ್ವದ ವಿಶ್ಲೇಷಣೆ.

ಈ ಎಲ್ಲಾ ವಿಶ್ಲೇಷಣೆಗಳನ್ನು ವೃತ್ತಿಶಿಕ್ಷಣ ಪಡೆದ ತಜ್ಞರ ತಂಡವೊಂದು ಮಾಹಿತಿ ಸಂಗ್ರಹಣೆ, ವಿಶ್ಲೇಷಣೆ, ಕಂಪನಿಯ ಅಧಿಕಾರ ವರ್ಗದೊಡನೆ ಚರ್ಚೆ ಇವನ್ನು ನಡೆಸಿ ಕೈಗೊಳ್ಳುವುದು. ಇದಕ್ಕೆ ಸಂಬಂಧಿಸಿದ ವೆಚ್ಚವನ್ನೂ ಕಂಪನಿ ಭರಿಸಬೇಕಾಗುತ್ತದೆ.

## ಪ್ರಯೋಜನಗಳು

ವಿನಿಯೋಜಕರಿಗೆ ಸಂಲೇಖವೊಂದರ ನಷ್ಟಸಂಭಾವ್ಯತೆಯ ಬಗ್ಗೆ ಸ್ಪಷ್ಟಚಿತ್ರ ಉದರಿ ದರ್ಜೆಯಿಂದ ದೊರೆಯುವುದೆಂಬುದನ್ನು ಒಪ್ಪಿಕೊಂಡರೂ ಕಂಪನಿಗಳು ಏಕೆ ಉದರಿದರ್ಜೆ ಪಡೆಯಬೇಕು? ಎಂಬ ಪ್ರಶ್ನೆ ಹಲವರನ್ನು ಕಾಡಬಹುದು. ಅದರಲ್ಲೂ ಉದರಿದರ್ಜೆ ಪಡೆಯಲು ಸಾಕಷ್ಟು ಹಣ ವ್ಯಯವಾಗುವುದರಿಂದ ಕೆಲವು ಕಂಪನಿಗಳು ಇದನ್ನು ನಿವಾರ್ಯವೆಚ್ಚ ಎಂದು ಪರಿಗಣಿಸಬಹುದಲ್ಲವೆ? ಮಾರುಕಟ್ಟೆಯಿಂದ ಹಣ ಸಂಗ್ರಹಿಸಬಯಸುವ ಕಂಪನಿಯ ಸಂಲೇಖವೊಂದಕ್ಕೆ ಬೇಡಿಕೆಯನ್ನು ಹೆಚ್ಚಿಸಬಹುದು. ಉತ್ತಮ ಉದರಿದರ್ಜೆ ಪಡೆದ ಸಾಲಪತ್ರಗಳಿಗೆ ಹೆಚ್ಚಿನ ವಿನಿಯೋಜಕರು ಹಣ ತೊಡಗಿಸಲು ಮುಂದಾಗುತ್ತಾರೆ. ಹೀಗಾಗಿ ನೀಡಿಕೆಯೊಂದನ್ನು ಸುಲಭವಾಗಿ ಮಾರಬಹುದು. ಉದರಿದರ್ಜೆಪಡೆದ ಕಂಪನಿಯಸಾಲಪತ್ರಗಳಿಗೆ ದ್ವಿತೀಯಕ ಮಾರುಕಟ್ಟೆಯಲ್ಲೂ ಬೇಡಿಕೆ ಹೆಚ್ಚು. ಭಾರತದ ಭಾರತದ ವಿನಿಯೋಜಕರು ಅಂತಹ ವಿಶ್ಲೇಷಣಾ ತಜ್ಞರಲ್ಲ. ಹಾಗಾಗಿ ಎಲ್ಲಾ ಕಂಪನಿಗಳು ಕಡ್ಡಾಯವಾಗಿ ಉದರಿ ದರ್ಜೆ ಪಡೆಯಬೇಕೆಂಬ ವಾದವೂ ಇದೆ. ಆದರೆ ಅವುಗಳ ಆವಶ್ಯಕತೆ ಇಲ್ಲದೆ ವ್ಯವಸ್ಥಾಪಕ ವರ್ಗದ ನಾಮಬಲದ ಆಧಾರದ ಮೇಲೆ ಹಲವು ಸಹಸ್ರ ಕೋಟಿ ಹಣ ಸಂಗ್ರಹಿಸಿರುವ ಕಂಪನಿಗಳು ಕಡ್ಡಾಯ ಮಾಡುವುದನ್ನು ವಿರೋಧಿಸುತ್ತಲಿವೆ. ''ವಾಣಿಜ್ಯಕ ಪತ್ರ'' ನೀಡುವ ಎಲ್ಲ ಕಂಪನಿಗಳು ಉದರಿ ದರ್ಜೆ ಪಡೆಯುವುದನ್ನು ಭಾರತೀಯ ರಿಸರ್ವ್‌ಬ್ಯಾಂಕ್ ಕಡ್ಡಾಯಗೊಳಿಸಿದೆ. ತನ್ನಿಂದ ಉದರಿ ಸೌಲಭ್ಯ ಪಡೆಯಬಯಸುವ ಎಲ್ಲಾ ಗುತ್ತಿಗೆ ಕಂಪನಿಗಳು ಉದರಿದರ್ಜೆ ಪಡೆಯಬೇಕೆಂದು ಭಾರತೀಯ ಸ್ಟೇಟ್ ಬ್ಯಾಂಕ್ ಕಡ್ಡಾಯಗೊಳಿಸಿದೆ. ಅದರಿಂದಾಗಿ ಉದರಿದರ್ಜೆ ಪಡೆಯುವ ಕಂಪನಿಗಳ ಸಂಖ್ಯೆ ಹೆಚ್ಚಾಗಿದೆ.

## ಉಪಸಂಹಾರ

ಇತ್ತೀಚೆಗೆ ಪ್ರಕಟವಾದ ಲೇಖನವೊಂದರ ಪ್ರಕಾರ 50ಕ್ಕೂ ಹೆಚ್ಚು ಕಂಪನಿಗಳು ಭಾಉಮಾಸೇ ಇಂದ ಉದರಿದರ್ಜೆ ಪಡೆದಿವೆ. ಭಾಉಮಾಸೇ ಕೋರುವ ಮಾಹಿತಿಹೆಚ್ಚಾಯಿತೆಂದು ಹೇಳಲಾಗಿದೆ. ದೊರೆತ ಮಾಹಿತಿಯನ್ನು ಗೋಪ್ಯವಾಗಿಡುವುದರ ಬಗ್ಗೆ ಕೆಲವು ಕಂಪನಿಗಳಿಗೆ ಅನುಮಾನವಿದೆ. ಎಲ್ಲಾ ಕಂಪನಿಗಳೂ ಉದರಿದರ್ಜೆ ಪಡೆಯಬೇಕೆಂದು ವಿನಿಯೋಜಕರ ಸಂಘಗಳು ಒತ್ತಾಯಿಸುತ್ತಿವೆ. ಇನ್ನೂ ಕೆಲವು ಉದರಿದರ್ಜೆ ನೀಡಿಕೆ ಸಂಸ್ಥೆಗಳನ್ನು ಸ್ಥಾಪಿಸಬೇಕೆಂಬ ಸಲಹೆಯೂ ಇದೆ. ಉದರಿದರ್ಜೆ ನೀಡಿಕೆ ವಿನಿಯೋಜಕರಿಗೆ ಹೆಚ್ಚು ಉಪಕಾರಿ ಎಂಬುದರಲ್ಲಿ ಎರಡು ಮಾತಿಲ್ಲ. ಶಿಕ್ಷಿತ ವಿನಿಯೋಜಕರು ಉದರಿದರ್ಜೆ ಪಡೆಯದ ಕಂಪನಿಗಳ ಸಂಲೇಖಗಳನ್ನು ಅನುಮಾನದ ದೃಷ್ಟಿಯಿಂದ ನೋಡುವ ದಿನ ದೂರವಿಲ್ಲ. ●

# ಸಾಲ ವಸೂಲಿ: ಸಮಸ್ಯೆ ಹಾಗೂ ಪರಿಹಾರ

**ಸಾಲ ನೀಡುವುದು ಬ್ಯಾಂಕರನ ಪ್ರಮುಖ ಕಾರ್ಯಭಾರ. ಆದರೆ ಸಾಲ ಕೊಟ್ಟೊಡನೆ ಅದರ ವಸೂಲಿಯ ಪ್ರಶ್ನೆಯೂ ಅದರ ಬೆನ್ನಿಗೆ ಅಂಟಿಕೊಂಡೇ ಇರುತ್ತದೆ. ಈ ಸಮಸ್ಯೆಯನ್ನು ಸದಾ ಸೃಷ್ಟಿಸಿಕೊಳ್ಳುತ್ತ ಇದಕ್ಕೆ ಪರಿಹಾರವನ್ನೂ ಕಂಡುಕೊಳ್ಳುತ್ತ, ಸಮಸ್ಯೆ ಉಲ್ಬಣ ಆಗದಂತೆ ಎಚ್ಚರಿಕೆ ವಹಿಸುತ್ತ, ಒಟ್ಟಿನಲ್ಲಿ ಇದೊಂದು ಲೀಲೆ ಎನ್ನುವಂತೆ ಕಾರ್ಯಪ್ರವೃತ್ತವಾಗುವುದು ಹೇಗೆ? ಈ ಅನುಭವಿ ಬ್ಯಾಂಕರರ ಅಭಿಪ್ರಾಯ ಓದಿ.**


**ಬಿ. ಎಸ್. ಚಂದ್ರಶೇಖರ**

**ವ್ಯವಸ್ಥಾಪಕರು**
**ಭಾರತೀಯ ಸ್ಟೇಟ್ ಬ್ಯಾಂಕ್, ಕಡಗಂಚಿ**


ಸಾರ್ವಜನಿಕ ಉಳಿತಾಯವನ್ನು ಉತ್ಪಾದಕ ಚಟುವಟಿಕೆಗಳಿಗೆ ಬಂಡವಾಳವಾಗಿ ಪರಿವರ್ತಿಸಿ ತನ್ಮೂಲಕ ವಿನಿಯೋಜನೆಯ ಚಕ್ರವನ್ನು ಪ್ರವರ್ತಿಸುವ ಕಾರ್ಯ ಬ್ಯಾಂಕುಗಳದು. ನೀಡಿದ ಸಾಲಗಳು ಸಕಾಲದಲ್ಲಿ ಮರುಪಾವತಿಯಾಗದಿದ್ದರೆ ವಿನಿಯೋಜನೆಯ ಚಕ್ರ ಸ್ಥಗಿತಗೊಳ್ಳುತ್ತದೆ. ದೇಶದ ಅರ್ಥವ್ಯವಸ್ಥೆಯಲ್ಲಿ ಬ್ಯಾಂಕುಗಳು ಮಹತ್ವಪೂರ್ಣ ಸಾರ್ವಜನಿಕ ಸಂಸ್ಥೆಗಳು. ನಿಧಿಗಳ ಸಮರ್ಪಕ ಪ್ರವರ್ತನ (recycling of funds) ಆಗದಿದ್ದರೆ ಅರ್ಥವ್ಯವಸ್ಥೆ ಏರುಪೇರಾಗಬಹುದು. ಆದ್ದರಿಂದ ಬ್ಯಾಂಕ್ ಸಾಲಗಳ ಮರುಪಾವತಿಯ ಮಹತ್ವವನ್ನು ಒತ್ತಿಹೇಳಬೇಕಿಲ್ಲ.

ಬ್ಯಾಂಕ್ ಸಾಲಗಳ ಮರುಪಾವತಿ ಇರಬೇಕಾದಷ್ಟು ಸಮರ್ಪಕವಾಗಿ ಇಲ್ಲ; ಅದು ಅಸಮರ್ಪಕ ಎಂದರೂ ಸರಿಯೇ. ಕಡಿಮೆ ದರದಲ್ಲಿ, ಸುಲಭ ಕಂತುಗಳಲ್ಲಿ ಮರುಪಾವತಿ ಮಾಡಬಹುದಾದ ಬ್ಯಾಂಕ್ ಸಾಲಗಳ ವಸೂಲಾತಿಯಲ್ಲಿಯೂ ಅಪರಿಹಾರ್ಯವೆನಿಸುವ ಸಮಸ್ಯೆಗಳು ಸೃಷ್ಟಿಯಾಗುತ್ತಿರುವುದು ನಿಜಕ್ಕೂ ಶೋಚನೀಯ. ಸರಕಾರದ ಸೂತ್ರದ ಗೊಂಬೆಯಾಗಿರುವ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಪ್ರಸ್ತುತ ಸಂದರ್ಭದಲ್ಲಿ ಇಂಥ ಚಿಂತನೆ ಎಷ್ಟರ ಮಟ್ಟಿಗೆ ಫಲಕಾರಿ ಅಥವಾ ಕಾರ್ಯಸಾಧು ಎಂಬ ಸಂಶಯಗಳನ್ನು ಒತ್ತಟ್ಟಿಗಿಟ್ಟು ಸಾಲ ವಸೂಲಿ ಸಮಸ್ಯೆಗೆ ಪರಿಹಾರ ಕುರಿತು ಚಿಂತಿಸುವುದು ಬ್ಯಾಂಕರುಗಳ ಕರ್ತವ್ಯ.

## ಸಾಲ ವಸೂಲಾತಿ ಸಮಸ್ಯೆಗೆ ಕಾರಣಗಳು

ಒಟ್ಟು ಬ್ಯಾಂಕ್ ಸಾಲಗಳಲ್ಲಿ ಶೇ. 40ರಷ್ಟು ಭಾಗ ಆದ್ಯತಾವಲಯಗಳೆನಿಸಿದ ಕೃಷಿ, ಸಣ್ಣ ಕೈಗಾರಿಕೆ ಮುಂತಾದ ಕ್ಷೇತ್ರಗಳಿಗೆ ಮೀಸಲಾದರೆ ಉಳಿದುದರಲ್ಲಿ ಸಿಂಹಪಾಲು ದೊಡ್ಡ ಕೈಗಾರಿಕೆಗಳದು. ಇವುಗಳಲ್ಲಿ ಬಹುಮುಖ್ಯ ಉತ್ಪಾದಕ ಚಟುವಟಿಕೆಯಾದ ಕೃಷಿ ಮಳೆ ಆಧಾರಿತವಾದ್ದರಿಂದ ಇಳುವರಿ ಅನಿಶ್ಚಿತ. ಇನ್ನು ನಮ್ಮ ಕೈಗಾರಿಕೆಗಳು ಭದ್ರ ನೆಲೆಯುಳ್ಳವೇ? ವಿದ್ಯುತ್ತಿನ ಕೊರತೆ, ಯಂತ್ರೋಪಕರಣಗಳ ಆಮದಿನ ಸಮಸ್ಯೆ, ಆಧುನಿಕ ತಂತ್ರಜ್ಞಾನದ ಅಭಾವ, ಕಚ್ಚಾ ಸಾಮಗ್ರಿಯ ಅಲಭ್ಯತೆ, ಸಾಗಾಣಿಕೆ ಮುಂತಾದ ಸಮಸ್ಯೆಗಳ ಜತೆಗೆ ಕಾರ್ಮಿಕ ಸಮಸ್ಯೆಯೂ ಸೇರಿ ಕೈಗಾರಿಕೆಯನ್ನೂ ಅನಿಶ್ಚಿತತೆಯ ಸುಳಿಯಲ್ಲಿ ಸಿಲುಕಿಸಿವೆ. ಇನ್ನು ದುರ್ಬಲ ವರ್ಗಗಳಿಗೆ ಸಾಮಾಜಿಕ ನ್ಯಾಯ ಒದಗಿಸುವ ದೃಷ್ಟಿಯಿಂದ ನೀಡಿರುವ ಅಗಾಧ ಸಂಖ್ಯೆಯ ಸಾಲಗಳನ್ನು ಕುರಿತು ಹೆಚ್ಚಿಗೆ ಹೇಳಬೇಕಾದುದಿಲ್ಲ.

ರಿಸರ್ವ್ ಬ್ಯಾಂಕ್ ಮತ್ತು ನಬಾರ್ಡ್ ಈ ಎಲ್ಲ ಸಂಗತಿಗಳನ್ನೂ ದೃಷ್ಟಿಯಲ್ಲಿಟ್ಟುಕೊಂಡು ಸಾಲಗಾರನಿಗೆ ಅಗತ್ಯವಾಗುವ ಉದರಿಯ ಮೊತ್ತವನ್ನೂ ಸಾಲಗಳ ಮರುಪಾವತಿಯ ಅವಧಿಯನ್ನೂ ಕಾಲಕಾಲಕ್ಕೆ ಮಾರ್ಪಡಿಸುತ್ತಲೇ ಬಂದಿವೆ. ಉದಾ: ಸಣ್ಣ ರೈತನೊಬ್ಬ ಬಾವಿ ತೋಡಲು ಪಡೆದುಕೊಳ್ಳುವ ಸಾಲವನ್ನು 10ರಿಂದ 12 ವಾರ್ಷಿಕ ಕಂತುಗಳಲ್ಲಿ ಮರುಪಾವತಿ ಮಾಡಲು ಅವಕಾಶವಿದೆ. ಪ್ರವಾಹ, ಬರ, ಬೆಳೆ ನಷ್ಟ ಮುಂತಾದ ಸಂದರ್ಭಗಳಲ್ಲಿ ಕೃಷಿ ಸಾಲಗಳಿಗೆ ಮರುಪಾವತಿ ಅವಧಿಯಲ್ಲಿ ರಿಯಾಯಿತಿಗಳಿವೆ.

ಅಸ್ವಸ್ಥ ಕೈಗಾರಿಕಾ ಘಟಕಗಳ ಪುನರುಜ್ಜೀವನಕ್ಕೆ ವಿಪುಲವಾದ ಅವಕಾಶಗಳನ್ನು ಕಲ್ಪಿಸುವುದು ರಿಸರ್ವ್ ಬ್ಯಾಂಕಿನ ನೀತಿ. ಆಂತರಿಕ ಅಥವಾ ಬಾಹ್ಯ ಕಾರಣಗಳಿಂದ ರೋಗಗ್ರಸ್ತವಾಗಿರುವ ಕೈಗಾರಿಕಾ ಘಟಕಗಳಿಗೆ ರಿಯಾಯಿತಿ ಬಡ್ಡಿದರ, ಕಡಿಮೆ ಭಾಗಾಂಶ (margin), ಬಡ್ಡಿಯ ನಿಧೀಕರಣ (funding of interest) ಮತ್ತು ಅವಧಿ ಸಾಲಗಳ ಸಂಬಂಧದಲ್ಲಿ ಮತ್ತಷ್ಟು ಸುಲಭ ಕಂತುಗಳು ಹಾಗೂ ಅವಧಿ ಲಭ್ಯವಾಗುತ್ತವೆ.

ಇನ್ನು ಎರಡನೆಯ ಹಂತಕ್ಕೆ ಬರೋಣ. ಸಾಲ ನೀಡಿಕೆಯಲ್ಲಿ ವಿಳಂಬ, ಕಡಿಮೆ ಮರುಪಾವತಿ ಅವಧಿ ನೀಡಿಕೆ, ಅಸಮರ್ಪಕ ಉಸ್ತುವಾರಿಯ ಫಲವಾದ ಉದರಿಯ ದುರುಪಯೋಗ, ಮರುಪಾವತಿಗೆ ನೀಡಲಾಗುತ್ತಿರುವ ಅಲ್ಪ ಗಮನ—ಇವು ವಸೂಲಾತಿ ಕುಂಠಿತವಾಗಲು ಕಾರಣಗಳಲ್ಲಿ ಮುಖ್ಯವಾದವು. ಹಣ ಸರಿಯಾದ ಉದ್ದೇಶಕ್ಕೆ ಬಳಕೆಯಾಗದಿದ್ದರೆ ಉತ್ಪಾದನೆ ಹೇಗಾದೀತು? ಮರುಪಾವತಿಗೆ ನೀಡುವ ಅವಧಿ ದೀರ್ಘವಾದರೆ ಹೇಗೋ ಎಂದು ಬ್ಯಾಂಕುಗಳ ಆತಂಕ. 'ಕ್ಷೇತ್ರ ಸಿಬ್ಬಂದಿಯ ಕೊರತೆಯಿದೆ' ಎಂಬ ಕೂಗು ಶಾಖೆಗಳಿಂದ ಕೇಳಿಬರುತ್ತಲೇ ಇದ್ದರೂ ಪರಿಣಾಮ ಶೂನ್ಯ. ವರ್ಷೇ ವರ್ಷೇ ಹೊಸ ಸಾಲಗಳು ಬೇರೆ. ಒಟ್ಟಾರೆ ಸಾಲಗಳ ಸಂಖ್ಯೆ ಏರುತ್ತಲೇ ಹೋಗಿ ಉಸ್ತುವಾರಿಗೆ ಮತ್ತಷ್ಟು ಧಕ್ಕೆ.

ಅಸ್ವಸ್ಥ ಘಟಕಗಳಲ್ಲಿ ಅಪಾರವಾದ ಹಣ ಸಿಲುಕಿಕೊಂಡಿದ್ದರೂ ಅವಕ್ಕೆ ದೊರೆಯಬೇಕಾದಷ್ಟು ಗಮನ ದೊರೆಯುತ್ತಿಲ್ಲ. ಅಸ್ವಸ್ಥತೆಯನ್ನು ಗುರುತಿಸುವಲ್ಲಿ, ಅದಕ್ಕೆ ಕಾರಣಗಳನ್ನು ಕಂಡುಹಿಡಿಯುವಲ್ಲಿ ಹಾಗೂ ಪುನರುಜ್ಜೀವನ ಕಾರ್ಯಕ್ರಮವನ್ನು ರೂಪಿಸಿ ಜಾರಿಗೊಳಿಸುವಲ್ಲಿ ವಿಳಂಬವಾಗುತ್ತಿದೆ. ನಿಧಿಗಳ ದಿಕ್ಚ್ಯುತಿ (diversion of funds) ಅಥವಾ ಕೆಟ್ಟ ವ್ಯವಸ್ಥಾಪನದ ಕಾರಣದಿಂದಲೂ ಕೈಗಾರಿಕಾ ಘಟಕವೊಂದು ಅಸ್ವಸ್ಥವಾಗಬಹುದು. ಇಂಥ ಘಟಕಗಳನ್ನು ಪುನರುಜ್ಜೀವನಕ್ಕೆ ಆಯ್ಕೆ ಮಾಡಿಕೊಂಡರೆ ಮತ್ತಷ್ಟು ನಿಧಿ ಸ್ಥಗಿತವಾಗುತ್ತದೆ.

## ಈಡೇರದ ಆಶಯಗಳು

ಬ್ಯಾಂಕ್ ಸಾಲಗಳಿಗೆ ಅವುಗಳ ಸ್ಥಿತಿಯನ್ನು ಅನುಸರಿಸಿ 1ರಿಂದ 8ರ ವರೆಗೆ ಸಂಕೇತಗಳನ್ನು ನೀಡುವುದರ ಮೂಲಕ ಅವುಗಳ ಸ್ವಾಸ್ಥ್ಯವನ್ನು ಸೂಚಿಸಬೇಕೆಂದೂ, ಉದರಿ ಉಸ್ತುವಾರಿಗೆ ಇದನ್ನು ಆಧರಿಸಿದ ಸ್ವಾಸ್ಥ್ಯ ಸಂಕೇತ ವ್ಯವಸ್ಥೆಯೊಂದನ್ನು (Health Code System) ಬಳಸಿಕೊಳ್ಳಬೇಕೆಂದೂ ರಿಸರ್ವ್ ಬ್ಯಾಂಕ್ ಆದೇಶ ನೀಡಿದೆ. ಈ ವ್ಯವಸ್ಥೆ ಸರಿಯಾಗಿ ಕೆಲಸ ಮಾಡದೆ ಸಂಕೇತ ಸಂಖ್ಯೆ ನೀಡುವುದು ಕೇವಲ ವಾರ್ಷಿಕ ವಿಧಿಯಾಗಿ ಉಳಿದಿದೆ. ಪರಿಸ್ಥಿತಿ ಉತ್ತಮಗೊಳ್ಳುವ ಸೂಚನೆಗಳೂ ಇಲ್ಲ. ಹಾಗೇ, ಕೃಷಿ ಸಾಲಗಳ ಸಂಬಂಧದಲ್ಲಿ ತಗಾದೆ ವಸೂಲಿ ಶಿಲ್ಕು (ತವಶಿ) [Demand Collection Balance—DCB] ಪುಸ್ತಕವನ್ನು ಇಡುವುದು ಬ್ಯಾಂಕುಗಳಿಗೆ ಕಡ್ಡಾಯವಾಗಿದೆ, ವರ್ಷಕ್ಕೊಮ್ಮೆ ನಡೆಯುವ ಈ ವಿಧಿ

ಯಿಂದ ವಸೂಲಾತಿಯ ಅಸಮರ್ಪಕತೆಯನ್ನು ಅಳಿಯುವುದಕ್ಕಿಂತ ಹೆಚ್ಚಿನ ಫಲವೇನೂ ಲಭ್ಯವಾಗಿಲ್ಲ.

## ವಸೂಲಾತಿಗೆ ತಂತ್ರಗಳು

1 ಸಾಲಗಾರರೊಂದಿಗೆ ಸತತ ಸಂಪರ್ಕ ಮರುಪಾವತಿಯ ಸಾಧ್ಯತೆಗಳನ್ನು ಹೆಚ್ಚಿಸುತ್ತದೆ. ಆದಷ್ಟು ಮಟ್ಟಿಗೆ ಈ ಬಾಂಧವ್ಯ ಮಧುರವಾಗಿದ್ದರೆ ಒಳ್ಳೆಯದು. ಸಾಲಗಾರರಿಗೂ, ಖಾತರಿದಾರರಿಗೂ ಮರುಪಾವತಿಗಾಗಿ ಆಗ್ರಹಿಸುವ ಸೂಚನಾ ಪತ್ರಗಳನ್ನು ಕಳಿಸಬೇಕು. ವಕೀಲರ ನೋಟೀಸು ಕೆಲವೊಮ್ಮೆ ಹೆಚ್ಚು ಪರಿಣಾಮಕಾರಿಯಾಗಬಹುದು.

2 ಸಾಲಗಾರನ ಬಳಿ ಹಣ ಸಂಗ್ರಹವಾಗುವಾಗ ವಸೂಲಾತಿಗಾಗಿ ಪ್ರಯತ್ನ ಶೀಘ್ರ ಫಲದಾಯಕವಾದೀತು. ಕೃಷಿ ಸಾಲವಾದರೆ ಬೆಳೆ ಮಾರಾಟ ಕಾಲದಲ್ಲಿ ಗ್ರಾಮಕ್ಕೆ ಭೇಟಿ ಉತ್ತಮ. ಕೈಗಾರಿಕಾ ಸಾಲವಾದರೆ ಹುಂಡಿಗಳ ಪಾವತಿಯ ಮೇಲೆ ಹತೋಟಿಯಿಡಬೇಕು.

3 ವಸೂಲಾತಿಗಾಗಿ ದಾವೆ ಹೂಡುವುದು ಅಂತಿಮ, ಆದರೆ ಅನೇಕ ವೇಳೆ ಅತ್ಯಂತ ಪ್ರಬಲ ಅಸ್ತ್ರ. ದಾವೆಗಳು ಶೀಘ್ರವಾಗಿ ಇತ್ಯರ್ಥವಾಗುವಂತೆ ನೋಡಿಕೊಳ್ಳುವುದು ತೀರ ಮುಖ್ಯ. ದಾವೆ ಹೂಡಿದ ಖಾತೆಗಳಲ್ಲಿ ಅಗಾಧವಾದ ಬ್ಯಾಂಕ್ ಹಣ ಸ್ಥಗಿತವಾಗಿದೆ. ದಾವೆಗಳು ಬೇಗ ಇತ್ಯರ್ಥವಾಗುವಂತೆ ಬ್ಯಾಂಕಿನ ವಕೀಲರನ್ನು ಚುರುಕುಗೊಳಿಸಬೇಕು. ಬ್ಯಾಂಕಿಗೆ ಒತ್ತೆಯಾದ ಆಸ್ತಿಯನ್ನು ಕಾನೂನುಬದ್ಧವಾಗಿ ವಶಪಡಿಸಿಕೊಳ್ಳುವ ಬೆದರಿಕೆ ಅನೇಕ ವೇಳೆ ಕೆಲಸ ಮಾಡುತ್ತದೆ. ಬ್ಯಾಂಕ್ ಸಾಲದ ದುರುಪಯೋಗದ ಸಂದರ್ಭಗಳಲ್ಲಿ ಕ್ರಿಮಿನಲ್ ದಾವೆ ಹೂಡುವುದನ್ನೂ ಬ್ಯಾಂಕುಗಳು ಪರಿಶೀಲಿಸಬಹುದು.

4 ಡಿಕ್ರಿಯಾದ ದಾವೆಗಳಿಗೆ ಅಮಲ್ಜಾರಿ ಮನವಿಗಳನ್ನು (execution petition)ಆದಷ್ಟು ಶೀಘ್ರವಾಗಿ ಸಲ್ಲಿಸುವುದು ಒಳ್ಳೆಯದು. ಅನೇಕ ಸಂದರ್ಭಗಳಲ್ಲಿ ಎಷ್ಟೋ ವರ್ಷಗಳಾದರೂ ದಾವೆಗಳಿಗೆ ಅಮಲ್ಜಾರಿ ಮನವಿ ಸಲ್ಲಿಸದಿರುವ ಶೋಚನೀಯ ಸ್ಥಿತಿ ಇಂದು ಬ್ಯಾಂಕುಗಳಲ್ಲಿ ಕಂಡುಬರುತ್ತಿದೆ.

5 ಸಣ್ಣ ಮೊತ್ತದ ಸಾಲಗಳಿಗೆ ನ್ಯಾಯಾಲಯದಲ್ಲಿ ದಾವೆ ಹೂಡುವುದು ವ್ಯಾವಹಾರಿಕವಲ್ಲವಾದ್ದರಿಂದ ಇಂಥ ಸಂದರ್ಭಗಳಲ್ಲಿ ಕರ್ನಾಟಕ ರಾಜ್ಯ ಸರಕಾರದ ಈ ಎರಡು ಅಧಿನಿಯಮಗಳನ್ನು ಬ್ಯಾಂಕುಗಳು ವಸೂಲಾತಿಗಾಗಿ ಬಳಸಿಕೊಳ್ಳಬಹುದು :

(i) ಕರ್ನಾಟಕ ಸಾರ್ವಜನಿಕ ಹಣ ವಸೂಲಿ ಅಧಿನಿಯಮ (KPMR Act),

(ii) ಕರ್ನಾಟಕ ಕೃಷಿ ಉದರಿ ಮತ್ತು ಇತರ ವಿವಿಧ ಉಪಬಂಧಗಳ ಅಧಿನಿಯಮ (KACOMP Act).

ಇವುಗಳಲ್ಲಿ ಮೊದಲನೆಯದು ಸರಕಾರಿ ಯೋಜನೆಯಡಿ ನೀಡಲಾದ ಎಲ್ಲ ಸಾಲಗಳಿಗೂ (ಉದಾ: IRDP, SEEUY ಇತ್ಯಾದಿ) ಅನ್ವಯವಾದರೆ ಎರಡನೆಯದು ಎಲ್ಲ ರೀತಿಯ ಕೃಷಿ ಸಾಲಗಳಿಗೂ ಅನ್ವಯವಾಗುತ್ತದೆ.

ವಾಸ್ತವ ಸಂಗತಿಯೇನೆಂದರೆ ವಸೂಲಾತಿಯಲ್ಲಿ ಬ್ಯಾಂಕರರಿಗೆ ಈ ಅಧಿನಿಯಮಗಳಿಂದ ಹೆಚ್ಚಿನ ನೆರವು ದೊರೆತಿಲ್ಲ. ಈ ಸ್ಥಿತಿ ಬದಲಾಗಬೇಕು.

6 ಸಾಲ ಮರುಪಾವತಿ ಶಿಬಿರಗಳನ್ನು ಏರ್ಪಡಿಸುವುದು ಹೆಚ್ಚಿನ ರೈತರನ್ನು ಮರುಪಾವತಿಗೆ ಪ್ರೇರೇಪಿಸುವ ದೃಷ್ಟಿಯಿಂದ ಮತ್ತು ಪ್ರಚಾರ ದೃಷ್ಟಿಯಿಂದ ಉಪಯುಕ್ತ.

## ಬೆಳೆಯುತ್ತಿರುವ ಸಮಸ್ಯೆ

ಕೇಂದ್ರ ಸರಕಾರ ಈಗಾಗಲೇ ಘೋಷಿಸಿರುವ ಕೃಷಿ ಮತ್ತು ಗ್ರಾಮೀಣ ಋಣ ಪರಿಹಾರ ಯೋಜನೆಯಡಿ ಲಕ್ಷಾಂತರ ರೈತರಿಗೆ ರೂ. 10 ಸಾವಿರದ ವರೆಗೆ ಋಣಪರಿಹಾರ ದೊರೆಯುವುದು ಎಲ್ಲರಿಗೂ ತಿಳಿದ ವಿಷಯ. ಸಣ್ಣ ರೈತರು ಮಾತ್ರವಲ್ಲದೆ ಮರುಪಾವತಿ ಸಾಮರ್ಥ್ಯವಿದ್ದರೂ ಹಾಗೆ ಮಾಡದಿರುವ ಸಬಲರಾದವರಿಗೂ ಈ ಸೌಲಭ್ಯ ದೊರೆಯುತ್ತಿರುವುದರಿಂದ ಮರುಪಾವತಿಗೆ ಸದ್ಯಕ್ಕೆ ಯಾರೂ ಮುಂದಾಗುತ್ತಿಲ್ಲ. ಈ ಯೋಜನೆಯ ಮೂಲ ಆಶಯಗಳು ಏನೇ ಇರಲಿ, ಸಾಲ ವಸೂಲಾತಿಯ ಕಾರ್ಯದಲ್ಲಂತೂ ಇದೊಂದು ಅಡ್ಡಗಲ್ಲು ಎಂದರೆ ತಪ್ಪಲ್ಲ. ಅಗ್ನಿಗೆ ಆಜ್ಯ ಹೊಯ್ದಂತೆ ಗ್ರಾಮೀಣ ಪ್ರದೇಶದ ಕೆಲವು ರಾಜಕೀಯ ಶಕ್ತಿಗಳು ರೈತರಲ್ಲಿ ತಪ್ಪುಭಾವನೆ ಮೂಡಿಸಿ ವಸೂಲಾತಿಯನ್ನು ಇನ್ನಷ್ಟು ಕಠಿಣವಾಗಿಸಿವೆ. ಇತರ ರೀತಿಯ ಸಾಲ ಪಡೆದವರು ಕೃಷಿ ಸಾಲಗಳಿಗೆ ದೊರೆಯುತ್ತಿರುವ ಸೌಲಭ್ಯ ತಮಗೂ ದೊರೆತೀತೋ ಎಂಬ ನಿರೀಕ್ಷೆಯಲ್ಲಿಯೇ ಇರುವಂತಿದೆ. ಕೈಗಾರಿಕೆಗಳಿಗೂ ಕೃಷಿಯಂತೆಯೇ ಎಡರು ತೊಡರುಗಳಿವೆಯಷ್ಟೆ?

## ಪರಿಸಮಾಪ್ತಿ

ಸಾಲ ವಸೂಲಾತಿಯ ವೈಫಲ್ಯಗಳಿಗೆಲ್ಲ ಕೇಂದ್ರ ಸರಕಾರದ ಈ ಯೋಜನೆಯೇ ಕಾರಣವೆನ್ನುವುದು ತಪ್ಪಾದೀತು. ಆದರೆ ಈ ಹೊಸ ಯೋಜನೆ ವಸೂಲಾತಿಯ ಸಮಸ್ಯೆಯನ್ನು ಮತ್ತಷ್ಟು ಜಟಿಲಗೊಳಿಸಿದೆ ಎನ್ನದೆ ವಿಧಿಯಿಲ್ಲ. ಅರ್ಥವ್ಯವಸ್ಥೆಯ ಮೇಲೆ ದೂರಗಾಮೀ ಪರಿಣಾಮ ಬೀರುವಂಥ ಸರಕಾರದ ಈ ನೀತಿಯನ್ನು ರಿಸರ್ವ್ ಬ್ಯಾಂಕ್ ಮೌನವಾಗಿ ಸ್ವಾಗತಿಸಿದೆ. ಬ್ಯಾಂಕುಗಳೂ ಅಷ್ಟೇ ಮೌನವಾಗಿ ಋಣಪರಿಹಾರ ನೀಡುವಲ್ಲಿ ಕ್ರಿಯಾಶೀಲವಾಗಿವೆ. ಅದಕ್ಕಿಂತ ಹೆಚ್ಚಿನದೇನನ್ನೂ ಮಾಡುವ ಸ್ಥಿತಿಯಲ್ಲಿ ಅವಿಲ್ಲ. ಬ್ಯಾಂಕಿಂಗ್ ವ್ಯವಸ್ಥೆಗೆ ಸ್ವಾಯತ್ತತೆ ಎಷ್ಟೊಂದು ಅಗತ್ಯ! ಆದರೆ ದುರದೃಷ್ಟವಶಾತ್ ಈ ಸಂದರ್ಭದಲ್ಲಿ ಅದನ್ನು ಕಲ್ಪಿಸಿಕೊಳ್ಳುವುದೂ ಕಷ್ಟ.

ಬ್ಯಾಂಕ್ ಸಾಲಗಳ ವಸೂಲಾತಿಯ ಬಗೆಗಿನ ಚಿತ್ರ ನಿರಾಶಾದಾಯಕವೇ ?...ಹಾಗಾಗಬೇಕಾದ್ದೇನೂ ಇಲ್ಲ. 'ಋಣಪರಿಹಾರ ನೀಡುವುದು ಒಮ್ಮೆ ಮಾತ್ರ' ಎಂಬ ಸರಕಾರದ ಘೋಷಣೆ ಆಸೆಯನ್ನು ಜೀವಂತವಾಗಿಟ್ಟಿದೆ. ಋಣಪರಿಹಾರ ನೀಡಿಕೆ ಕಾರ್ಯವೂ ಇಷ್ಟರಲ್ಲೇ ಮುಗಿದೀತು. ಅಪಾಯದ ಅರಿವು ಈಗಾದರೂ ಬ್ಯಾಂಕುಗಳಿಗೆ ಮೂಡಿದ್ದರೆ ಅವು ಮುಂದೆ ಸರಿಯಾದ ಹೆಜ್ಜೆಗಳನ್ನಿಡುವುದು ಸಾಧ್ಯ.

ಕೃಷೀತರ ಸಾಲಗಳಲ್ಲಿ ಆದ್ಯಗಮನ ಸಲ್ಲಬೇಕಾದ್ದು ಸಣ್ಣ ಮತ್ತು ದೊಡ್ಡ ಕೈಗಾರಿಕಾ ಸಾಲಗಳಿಗೆ. ಅವುಗಳ ವಸೂಲಾತಿಗೆ ಹೊಸ ಹೊಸ ತಂತ್ರಗಳನ್ನು ರೂಪಿಸಬೇಕಾದೀತು.

ಇತ್ತೀಚೆಗೆ ಬ್ಯಾಂಕುಗಳು ಕಂಡುಕೊಂಡ ಉಪಾಯವೆಂದರೆ, ಮರುಪಾವತಿ ವಿಷಯದಲ್ಲಿ ಸಾಲಗಾರನೊಡನೆ ರಾಜಿ ಮಾಡಿಕೊಳ್ಳುವುದು. ಚಕ್ರಬಡ್ಡಿಗೆ ಬದಲು ಸರಳಬಡ್ಡಿ, ಮರುಪಾವತಿ ಮಾಡಬೇಕಾದ ಒಟ್ಟು ಮೊತ್ತದಲ್ಲಿ ಕಡಿತ ಮುಂತಾದ ರಿಯಾಯಿತಿಗಳನ್ನು ನೀಡಿ ಸಾಲದ ಆದಷ್ಟು ಭಾಗವನ್ನು ಶೀಘ್ರವಾಗಿ ವಸೂಲಿ ಮಾಡುವುದೇ ಇದರ ಉದ್ದೇಶ. ನ್ಯಾಯಾಲಯದ ದಾವೆಗಳ ಇತ್ಯರ್ಥ ವಿಳಂಬವಾಗುವುದರಿಂದ ಈ ಕ್ರಮಕ್ಕೆ ಹೆಚ್ಚು ಒತ್ತು ದೊರೆತಿದೆ. ಬ್ಯಾಂಕಿಗೆ ಒತ್ತೆಯಾದ ಆಸ್ತಿಗಳ ವಶ ಮತ್ತು ವಿಲೆಗೆ ಸಂಬಂಧಿಸಿದಂತೆ ಬ್ಯಾಂಕುಗಳಿಗೆ ವಿಶೇಷ ಹಕ್ಕು ದೊರೆಯಬೇಕು. ಇಲ್ಲದಿದ್ದರೆ ವಸೂಲಾತಿ ಕಠಿಣವಾದೀತು. ಬ್ಯಾಂಕ್ ಸಾಲಗಳಿಗೆ ಸಂಬಂಧಿಸಿದ ದಾವೆಗಳಿಗೆ ಪ್ರತ್ಯೇಕ ನ್ಯಾಯಾಧಿಕರಣ(tribunal)ಬೇಕೆನ್ನುವ ಬ್ಯಾಂಕರುಗಳ ಬಹುದಿನದ ಬೇಡಿಕೆ ಸಮರ್ಥನೀಯ ಮತ್ತು ಪರಿಶೀಲನೆಗೆ ಅರ್ಹ. ಇಷ್ಟೆಲ್ಲಾ ಆಗಿ ವಸೂಲಾತಿಯ ಸ್ಥಿತಿ ಉತ್ತಮಗೊಳ್ಳುವುದೆಂಬುದು ಇನ್ನೂ ದೂರದ ಆಸೆ.

---

**1951ರ ರಾಜ್ಯ ಹಣಕಾಸು ನಿಗಮ ಅಧಿನಿಯಮದ ಅಡಿಯಲ್ಲಿ ಹಣಕಾಸು ಕಾರ್ಪೊರೇಷನ್ನುಗಳಿಗೆ ಸಾಲ ವಸೂಲಿಗಾಗಿ ಹಲವು ಅಧಿಕಾರಗಳನ್ನು ನೀಡಲಾಗಿದೆ. ಒಪ್ಪಲಾದ ಅವಧಿಗೂ ಮುಂದಾಗಿಯೇ ಮರುಪಾವತಿಗೆ ಕರೆ ನೀಡುವುದು; ಹಕ್ಕು ಜಾರಿಗಾಗಿ ವಿಶೇಷ ಉಪಬಂಧ; ನ್ಯಾಯಾಲಯದಲ್ಲಿ ಕ್ರಮ—ಇತ್ಯಾದಿಗಳ ವಿಷಯದಲ್ಲಿ ಅವಕ್ಕೆ ಹಲವು ಅಧಿಕಾರಗಳಿವೆ. ಬ್ಯಾಂಕಿಂಗ್ ಕಂಪನಿಗಳ (ಸಂಸ್ಥೆಗಳ ವಟಾವಣೆ ಹಾಗೂ ವರ್ಗಾವಣೆ) ಅಧಿನಿಯಮಕ್ಕೆ 1985ರ ಡಿಸೆಂಬರ್‌ನಲ್ಲಿ ತಿದ್ದುಪಡಿ ಮಾಡಿದಾಗ ಇಂಥವೇ ಉಪಬಂಧಗಳನ್ನು ಬ್ಯಾಂಕಿಂಗ್ ಸಂಸ್ಥೆಗಳಿಗೆ ಸಂಬಂಧಿಸಿದಂತೆಯೂ ಮಾಡಬಹುದಿತ್ತು. ರಿಸರ್ವ್ ಬ್ಯಾಂಕ್ ಮತ್ತು ಭಾರತೀಯ ಬ್ಯಾಂಕುಗಳ ಸಂಘ ಈ ಅವಕಾಶವನ್ನು ಕಳೆದುಕೊಂಡುವೆನಿಸುತ್ತದೆ. ಈಗಲೂ ಕಾಲ ಮಿಂಚಿಲ್ಲ. ಭಾರತೀಯ ಬ್ಯಾಂಕಿಂಗಿನ ಈ ಎರಡು ಕಾವಲು ಸಂಸ್ಥೆಗಳು ಯುಕ್ತ ಕ್ರಮ ತೆಗೆದುಕೊಳ್ಳುವಂತೆ ಸರ್ಕಾರವನ್ನು ಒಡಂಬಡಿಸಬಹುದು.**

**—ಟಿ. ಕೆ. ವೇಲಾಯುಧಂ**

# ಖಾಸಗಿ ಬ್ಯಾಂಕುಗಳ ಸ್ಥಿತಿ-ಗತಿ

**ಭಾರತದ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಖಾಸಗಿ ಒಡೆತನದ ಬ್ಯಾಂಕುಗಳು ಬಲು ಚಿಕ್ಕವು. ಸರ್ಕಾರಿ ಒಡೆತನದ ಬೃಹತ್ ಬ್ಯಾಂಕುಗಳ ಮುಂದೆ ಇವು ಏನೇನೂ ಅಲ್ಲ. ಆದರೆ ಗಾತ್ರವೇ ಆರೋಗ್ಯದ ಲಕ್ಷಣವಲ್ಲ. ಸರ್ಕಾರಿ ಒಡೆತನವಿದ್ದ ಮಾತ್ರಕ್ಕೆ ಎಲ್ಲವೂ ಚೆನ್ನಲ್ಲ—ಎಂಬ ಸತ್ಯ ಈಚೀಚೆಗೆ ಅರಿವಿಗೆ ಬರುತ್ತಿದೆ. ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು. ಮಹಾ ಮತ್ಸ್ಯಗಳಿಂದ ಕೂಡಿದ ವಿಶಾಲ ಸಾಗರದಲ್ಲಿ ಈ ಸಣ್ಣ ಜಲಚರಗಳ ಪಾತ್ರ ಕಿರಿದಲ್ಲ ಎನ್ನುತ್ತಾರೆ ಲೇಖಕರು.**

**ಹೇಮಚಂದ್ರ**
**ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್**
**ರಾಯಚೂರು 584 101**

ಭಾರತದ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಖಾಸಗಿ ವಲಯದ ಬ್ಯಾಂಕುಗಳ ಪಾತ್ರ ಕಿರಿದೇನಲ್ಲ. ಸಂಖ್ಯಾಗಾತ್ರದಲ್ಲಿ ಖಾಸಗಿ ಬ್ಯಾಂಕುಗಳ ಸಂಖ್ಯೆ ಹೆಚ್ಚಿದ್ದರೂ ಶಾಖಾಗಾತ್ರದಲ್ಲಿ ಕಡಿಮೆ. ಖಾಸಗಿ ಬ್ಯಾಂಕೊಂದರ ಅತ್ಯಂತ ಚಿಕ್ಕ ಶಾಖೆಯೂ ಬ್ಯಾಂಕಿಂಗ್ ಶಬ್ದದ ಪರಿಧಿಯಲ್ಲಿ ಬರುವ ಎಲ್ಲ ಕಾರ್ಯಗಳನ್ನೂ ನಿರ್ವಹಿಸುವದು. ಅಲ್ಲದೆ ಸರಕಾರ, ಭಾರತೀಯ ರಿಸರ್ವ್‌ಬ್ಯಾಂಕು, ಬ್ಯಾಂಕುಗಳಿಗೆ ನಿಗದಿಪಡಿಸಿದ ಸಾಮಾಜಿಕ–ಆರ್ಥಿಕ ಧ್ಯೇಯಗಳ ಹೊಣೆಯನ್ನೂ ಹೊತ್ತಿದೆ.

ಸದ್ಯದ ಸ್ಥಿತಿ—ಮಾರ್ಚ್, 1989ರ ಕೊನೆಯ ವರೆಗೆ ಭಾರತದಲ್ಲಿ 24 ಖಾಸಗಿ ಬ್ಯಾಂಕುಗಳ ಒಟ್ಟು 3,753 ಶಾಖೆಗಳಿದ್ದುವು. ಅವುಗಳ ಒಟ್ಟು ಠೇವಣಿ ರೂ. 6,621 ಕೋಟಿ. ಹಾಗೂ ಉದರಿ ಹಂಚಿಕೆ ರೂ. 3,575 ಕೋಟಿ. ಈ ಬ್ಯಾಂಕುಗಳಿಂದ ಆದ್ಯತಾವಲಯಕ್ಕೆ ರೂ. 1,325 ಕೋಟಿ ಹರಿದಿದೆ. ಈ 24 ಬ್ಯಾಂಕುಗಳ ಪೈಕಿ, 15 ಬ್ಯಾಂಕುಗಳು ನೂರಕ್ಕೂ ಹೆಚ್ಚಿನ ಶಾಖೆಗಳನ್ನು ಹೊಂದಿವೆ; 14 ಬ್ಯಾಂಕುಗಳು ಕಳೆದ ಆರು ದಶಕಗಳಿಂದ ಅಸ್ತಿತ್ವದಲ್ಲಿವೆ. ಎಲ್ಲ ಖಾಸಗಿ ಬ್ಯಾಂಕುಗಳ ಒಟ್ಟು ಸಾಮ್ಯಷೇರು ಬಂಡವಾಳ ರೂ. 24 ಕೋಟಿ ಇದ್ದು ಇದು ಎಲ್ಲ ಬ್ಯಾಂಕುಗಳ ಸಾಮ್ಯಷೇರು ಬಂಡವಾಳದ ಶೇ. 1.2ರಷ್ಟಾಗುವುದು.

ಖಾಸಗಿ ಬ್ಯಾಂಕುಗಳ ಶಾಖಾಜಾಲ ದೇಶದ ಉದ್ದಗಲಕ್ಕೂ ಹರಡಿದೆ. ಹೆಚ್ಚಿನ ಶಾಖೆಗಳನ್ನು ತೆರೆಯಬೇಕೆಂದರೆ ಭಾರತೀಯ ರಿಸರ್ವ್ ಬ್ಯಾಂಕಿನಿಂದ ಪರವಾನಿಗೆ ಅಷ್ಟು ಸುಲಭವಾಗಿ ಈ ಬ್ಯಾಂಕುಗಳಿಗೆ ಸಿಗುತ್ತಿಲ್ಲ. ಭಾರತೀಯ ರಿಸರ್ವ್ ಬ್ಯಾಂಕು ಈ ಬ್ಯಾಂಕುಗಳನ್ನು ಪ್ರಾಂತೀಯ ಬ್ಯಾಂಕುಗಳೆಂದೇ ಪರಿಗಣಿಸಿದೆ. ಖಾಸಗಿ ಬ್ಯಾಂಕುಗಳಾದರೊ, ಅಷ್ಟೇಕೆ ಕೆಲವು ರಾಷ್ಟ್ರೀಕೃತ ಬ್ಯಾಂಕುಗಳು ಸಹ, ಅವು ಹುಟ್ಟಿ ಬೆಳೆದ ಪ್ರಾಂತಗಳ ಹೆಸರನ್ನೇ ಹೊಂದಿವೆ. ಉದಾ: ಕರ್ನಾಟಕ ಬ್ಯಾಂಕ್ ನಿ., ಬ್ಯಾಂಕ್ ಆಫ್ ರಾಜಾಸ್ಥಾನ್ ನಿ., ಸಾಂಗ್ಲಿ ಬ್ಯಾಂಕ್ ನಿ., ಇತ್ಯಾದಿ. ಈ ಎಲ್ಲ ಬ್ಯಾಂಕುಗಳೂ ತಮ್ಮ ತಮ್ಮ ರಾಜ್ಯಗಳಲ್ಲಿ ಹೆಚ್ಚಿನ ಶಾಖೆಗಳನ್ನು ಹೊಂದಿವೆ.

## ಕಟ್ಟುಪಾಡುಗಳು

ಭಾರತದಲ್ಲಿ ಸಾಮಾನ್ಯವಾಗಿ ಬ್ಯಾಂಕುಗಳಿಗೆ ತಮ್ಮ ವ್ಯವಹಾರ ನಡೆಸಲು ಹೆಚ್ಚಿನ ಸ್ವಾತಂತ್ರ್ಯವಿಲ್ಲ. ಭಾರತೀಯ ರಿಸರ್ವ್ ಬ್ಯಾಂಕೇ ಇನ್ನೂ ಸ್ವಾಯತ್ತ ಸಂಸ್ಥೆಯಾಗಿಲ್ಲ. ಸರಕಾರದ ಆದೇಶದ ಮೇರೆಗೆ ಭಾರತೀಯ ರಿಸರ್ವ್ ಬ್ಯಾಂಕು ಎಲ್ಲ ಬ್ಯಾಂಕುಗಳಿಗೂ ಅನ್ವಯಿಸುವಂತೆ ಏಕರೂಪ ನಿಬಂಧನೆಗಳನ್ನು ರೂಪಿಸಿದೆ. ಠೇವಣಿ ಸಂಗ್ರಹಣೆ, ಉದರಿ ನೀಡಿಕೆ, ಆದ್ಯತಾವಲಯಕ್ಕೆ ಧನಪೋಷಣೆ, ಸೇವಾಕ್ಷೇತ್ರ ಅಭಿಗಮನ ಎಲ್ಲದರಲ್ಲೂ ಖಾಸಗಿ ಬ್ಯಾಂಕುಗಳು ರಾಷ್ಟ್ರೀಕೃತ ಬ್ಯಾಂಕುಗಳೊಂದಿಗೆ ಸಮನಾಗಿ ಸ್ಪರ್ಧಿಸಬೇಕು.

ಬ್ಯಾಂಕ್ ವ್ಯವಹಾರದಲ್ಲಾದ ಗಣನೀಯ ಪ್ರಮಾಣದ ಹೆಚ್ಚಳ ಸರಕಾರ ವಿಧಿಸಿರುವ ಸಾಮಾಜಿಕ-ಆರ್ಥಿಕ ಧ್ಯೇಯಗಳ ಹೊಣೆಗಾರಿಕೆ, ತೀರಾ ಇತ್ತೀಚಿನ ಸೇವಾಕ್ಷೇತ್ರ ಅಭಿಗಮನ ಎಲ್ಲವನ್ನೂ ನಿಭಾಯಿಸುವುದು ಆರ್ಥಿಕ ಹಾಗೂ ಮಾನವ ಸಂಪನ್ಮೂಲದ ತೀವ್ರ ಕೊರತೆಯಿರುವ ಖಾಸಗಿ ಬ್ಯಾಂಕುಗಳಿಂದ ಕಷ್ಟಸಾಧ್ಯ.

ಖಾಸಗಿ ಬ್ಯಾಂಕುಗಳಲ್ಲಿ ಅಧೋರಚನೆಯದೇ ಒಂದು ಸಮಸ್ಯೆಯಾದರೆ ಹಣದ ವಿನಿಯೋಜನೆಯದು ಇನ್ನೊಂದು ಸಮಸ್ಯೆ.

## ಮಾನ್ಯತೆ

ಈ ಬ್ಯಾಂಕುಗಳಿಗೆ ಸರಕಾರದ ಮಾನ್ಯತೆ ಇದ್ದರೂ ಸಹ ಬಹಳಷ್ಟು ಸಲ ಈ ಬ್ಯಾಂಕುಗಳು ನೀಡುವ ಚೆಕ್ಕು, ಡ್ರಾಫ್ಟು, ಬ್ಯಾಂಕ್ ಖಾತರಿಗಳನ್ನು ಕೆಲವು ಸರಕಾರಿ ಅಭಿಕರಣಗಳು ಮಾನ್ಯತೆ ಮಾಡುವುದಿಲ್ಲ. ಸರಕಾರಿ ಸಂಸ್ಥೆಗಳು ಹಾಗೂ ಸರಕಾರಿ ಒಡೆತನದ ಉದ್ದಿಮೆಗಳು ಸಾಮಾನ್ಯವಾಗಿ ಖಾಸಗಿ ಬ್ಯಾಂಕುಗಳ ಜೊತೆ ವ್ಯವಹರಿಸದಿರುವುದರಿಂದ, ಅವುಗಳಿಂದ ಬ್ಯಾಂಕುಗಳಿಗೆ ದೊರೆಯಬಹುದಾದ ದೊಡ್ಡ ಮೊತ್ತದ ಠೇವಣಿ ಮತ್ತು ಶುಲ್ಕಾಧಾರಿತ ವ್ಯವಹಾರದಿಂದ ವಂಚಿತವಾಗುತ್ತವೆ.

## ವ್ಯವಸ್ಥಿತ ವೈಯಕ್ತಿಕ ಸೇವೆ

ತನ್ನ ಗ್ರಾಹಕರಿಗೆ ನೀಡುವ ಉನ್ನತ ಗುಣಮಟ್ಟದ, ವ್ಯವಸ್ಥಿತ ವೈಯಕ್ತಿಕ ಸೇವೆಯೇ ಖಾಸಗಿ ಬ್ಯಾಂಕುಗಳ ಸಂಜೀವಿನಿಯಾಗಿದೆ. ಬ್ಯಾಂಕುಗಳ ಪ್ರಾಂತೀಯ ತಳಹದಿಯೂ ವೈಯಕ್ತಿಕ ಸೇವೆ ಬಯಸುವ ಗ್ರಾಹಕರ ಪ್ರಮುಖ ಆಕರ್ಷಣೆಯಾಗಿದೆ.

ಠೇವಣಿ ಸಂಗ್ರಹಣೆಗಾಗಿ ಈ ಬ್ಯಾಂಕುಗಳು ಪಡಬೇಕಾದ ಶ್ರಮ ಅಷ್ಟಿಷ್ಟಲ್ಲ. ಸರಕಾರದ ಅಭಯಹಸ್ತ ಇಲ್ಲವೆಂದ ಮೇಲೆ ಠೇವಣಿಯೆಲ್ಲವೂ ಸಾರ್ವಜನಿಕ ಮೂಲದಿಂದಲೇ ಬರಬೇಕು. ಸುಮಾರು ಒಂದು ಕೋಟಿ ರೂಪಾಯಿ ಠೇವಣಿ ಸಂಗ್ರಹಿಸಲು ರಾಷ್ಟ್ರೀಕೃತಬ್ಯಾಂಕುಗಳಿಗೆ ಹತ್ತುಸಾವಿರ ಗ್ರಾಹಕರು ಬೇಕಾದರೆ ಇದೇ ಕೆಲಸಕ್ಕೆ ಖಾಸಗಿ ಬ್ಯಾಂಕುಗಳಿಗೆ ಹೆಚ್ಚಿನ ಗ್ರಾಹಕರು ಬೇಕು ಹಾಗೂ ಇನ್ನೂ ಹೆಚ್ಚಿನ ಶ್ರಮಪಡಬೇಕು.

## ಸಾಧನೆ

ಭಾರತದಲ್ಲಿ ಖಾಸಗಿ ಬ್ಯಾಂಕುಗಳ ದೈತ್ಯ ವೈಶ್ಯ ಬ್ಯಾಂಕ್ ನಿ., ಎನ್ನಬಹುದು. ಕನ್ನಡ ನಾಡಿನಲ್ಲಿ ಹುಟ್ಟಿ-ಬೆಳೆದು, ಬೆಂಗಳೂರಿನಲ್ಲಿ ಕೇಂದ್ರ ಕಛೇರಿಯನ್ನು ಹೊಂದಿರುವ ಈ ಬ್ಯಾಂಕಿನ ಪ್ರಗತಿ ಚಕಿತಗೊಳಿಸುವಂತಹದು. ಮಾರ್ಚ್ 1990ರ ವರೆಗೆ ದೇಶದ ಉದ್ದಗಲಕ್ಕೂ ಹರಡಿದ ತನ್ನ 283 ಶಾಖೆಗಳಿಂದ ರೂ. 711.95 ಕೋಟಿ ಠೇವಣಿ ಪಡೆದು ರೂ. 380.80 ಕೋಟಿಗಳಷ್ಟು ಉದರಿ ನೀಡಿ ರೂ. 4.20 ಕೋಟಿಗಳಷ್ಟು ಲಾಭ ಪಡೆದಿದೆ. ಉತ್ತಮ ಸೇವೆ, ವಿಚಕ್ಷಣೆಯಿಂದ ಮುನ್ನುಗ್ಗುವ ಸಾಹಸ, ಹಾಗೂ ಸ್ವಲ್ಪಮಟ್ಟಿನ ಸ್ಪರ್ಧೆ ಇದ್ದಲ್ಲಿ ಬ್ಯಾಂಕು ಮುಂದುವರಿಯಬಲ್ಲದು ಎಂಬುದಕ್ಕೆ ಇದೊಂದು ಉದಾಹರಣೆ ಮಾತ್ರ.

ಆಧುನಿಕ ತಂತ್ರಜ್ಞಾನದಲ್ಲಿ ಹೂಡಲು ಬಂಡವಾಳದ ಕೊರತೆ, ಸಾಕಷ್ಟು ತರಬೇತಿ ಹೊಂದಿರದ

[18ನೇ ಪುಟ ನೋಡಿ

# ಕೇಂದ್ರ ಬ್ಯಾಂಕುಗಳ ಪಾತ್ರ*

## ದೀರ್ಘಕಾಲಿಕ ಬೆಲೆ ಸ್ಥಾಯಿತ್ವ ಮತ್ತು ಹಣಕಾಸು ವ್ಯವಸ್ಥೆಗಳ ಸ್ವಾಸ್ಥ್ಯವನ್ನು ಖಚಿತಪಡಿಸಿಕೊಳ್ಳುವುದು ಮುಖ್ಯ ಕಾರ್ಯಗಳು.

||ಅಂತರರಾಷ್ಟ್ರೀಯ ಹಣನಿಧಿಯ ದೃಷ್ಟಿಯಲ್ಲಿ||


ಮೂಲ: **ರಿಚರ್ಡ್ ಡಿ. ಎರ್ಬ್**

ಅನುವಾದಕರು :

★**ಬಿ. ಎಸ್. ಚಂದ್ರಶೇಖರ,** ಶಾಖಾ ವ್ಯವಸ್ಥಾಪಕರು, ಭಾರತೀಯ ಸ್ಟೇಟ್ ಬ್ಯಾಂಕ್, ಕಡಗಂಚಿ–೫೮೫ ೩೧೧ ★ **ಸಾ. ರಾಜಗೋಪಾಲ,** ಪ್ರಧಾನ ಕಾರ್ಯದರ್ಶಿ, ಸಮನ್ವಯ ಸಮಿತಿ ★**ಅಮರ ನಾರಾಯಣ,** ಅಧಿಕಾರಿ, ಕೃಷಿ ಬ್ಯಾಂಕಿಂಗ್ ವಿಭಾಗ, ಭಾರತೀಯ ಸ್ಟೇಟ್ ಬ್ಯಾಂಕು, ಸ್ಥ.ಪ್ರ.ಕ. ಬೆಂಗಳೂರು–೧ ★ **ಎನ್. ಎಂ. ಕೃಷ್ಣಮೂರ್ತಿ,** ಮೈಸೂರು ಬ್ಯಾಂಕು, ರವೀಂದ್ರ ನಗರ ಬಡಾವಣೆ ಶಾಖೆ, ಶಿವಮೊಗ್ಗ–೫೭೭ ೨೦೨ ★ **ಕೆ. ಎನ್. ಮಹಾಬಲ,** ಕನ್ನಡ ವಿಭಾಗ, ಭಾರತೀಯ ಸ್ಟೇಟ್ ಬ್ಯಾಂಕ್, ಸ್ಥ.ಪ್ರ.ಕ. ಬೆಂಗಳೂರು–೧ ★ **ಎಚ್. ಕೆ. ಜಯರಾವ್,** ಭಾರತೀಯ ಸ್ಟೇಟ್ ಬ್ಯಾಂಕ್, ಮೈಸೂರು ಶಾಖೆ–೫೭೦ ೦೨೪ ★ **ಹೇಮಚಂದ್ರ,** ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್, ರಾಯಚೂರು ಮುಖ್ಯ ಶಾಖೆ–೫೮೪ ೧೦೧ ★ **ಸಿ. ಕೆ. ರಂಗಾಚಾರಿ,** ಮೈಸೂರು ಬ್ಯಾಂಕು, ವಲಯ ಕಛೇರಿ, ಮೈಸೂರು–೫೭೦ ೦೨೩ ★ **ಸತ್ಯನಾರಾಯಣ ಜೋಯಿಸ್,** ಮೈಸೂರು ಬ್ಯಾಂಕು, ಅರಸೀಕೆರೆ–೫೭೩ ೧೧೩


ಈಚಿನ ವರ್ಷಗಳಲ್ಲಿ ತಮ್ಮ ಕೇಂದ್ರ ಬ್ಯಾಂಕುಗಳ ಕೈ ಬಲಗೊಳಿಸಲು ಅನೇಕ ದೇಶಗಳಲ್ಲಿ ಪ್ರಯತ್ನಗಳು ನಡೆಯುತ್ತಿವೆ. ಆರ್ಥಿಕ ಸಾಧನೆಗೆ ಪರಿಣಾಮಕಾರಿ ಕೇಂದ್ರ ಬ್ಯಾಂಕೊಂದು ನೀಡಬಲ್ಲ ಮುಖ್ಯ ಕಾಣಿಕೆಗೆ ಹಲವು ದೇಶಗಳಲ್ಲಿ ಮಾನ್ಯತೆ ಹೆಚ್ಚುತ್ತಿರುವುದನ್ನು ಇದು ಪ್ರತಿಬಿಂಬಿಸುತ್ತದೆ. ಈ ಬೆಳವಣಿಗೆಯ ಬೆಳಕಿನಲ್ಲಿ ಶಕ್ತ ಮತ್ತು ಪರಿಣಾಮಕಾರಿ ಕೇಂದ್ರ ಬ್ಯಾಂಕನ್ನು ಎತ್ತಿತೋರಿಸುವ ಈ ಮುಂದಿನ ಲಕ್ಷಣಗಳನ್ನು ಈ ಲೇಖನ ನಿರೂಪಿಸುತ್ತದೆ:

- ಅದರ ಪ್ರಾಥಮಿಕ ಪಾತ್ರ ಮತ್ತು ಹೊಣೆಯ ಒಂದು ಸ್ಪಷ್ಟ ಪರಿಜ್ಞಾನ
- ಮಧ್ಯಮಾವಧಿಯ ಒಂದು ನೋಟ
- ಒಂದು ಸದೃಢ ವೃತ್ತಿಪರ ಆಧಾರ ಮತ್ತು ಸಾರ್ವಜನಿಕ ಅರಿವು.

ಕೇಂದ್ರ ಬ್ಯಾಂಕಿನ ಸ್ವಾತಂತ್ರ್ಯ ಪ್ರಶ್ನೆಯನ್ನು ಈ ಲೇಖನದ ಕೊನೆಯ ಭಾಗದಲ್ಲಿ ಸಂಕ್ಷೇಪವಾಗಿ ಪರಿಶೀಲಿಸಿದೆ.

* Richard D. Erb, *Finance and Development*, December 1989

### ಹಣ ಸಂಬಂಧಿ ಜವಾಬ್ದಾರಿಗಳು

ವಿಶ್ವಾದ್ಯಂತ ಕೇಂದ್ರ ಬ್ಯಾಂಕುಗಳ ಚಟುವಟಿಕೆಗಳಲ್ಲಿ ಬಹಳಷ್ಟು ವೈವಿಧ್ಯ ಎದ್ದುಕಾಣುವಂತಿದ್ದರೂ, ಕೇಂದ್ರ ಬ್ಯಾಂಕು ಅರ್ಥವ್ಯವಸ್ಥೆಯೊಂದರ ಮೇಲೆ ತನ್ನ ಅತ್ಯಂತ ವ್ಯಾಪಕ ಪರಿಣಾಮವನ್ನು ಹೊಂದಿರುವುದು ಹಣ ನೀತಿಯ ನಿರ್ವಹಣೆಯ ಮೂಲಕ. ಬೆಳವಣಿಗೆ, ಉದ್ಯೋಗ, ಹಣದುಬ್ಬರ, ಬಡ್ಡಿದರಗಳು, ವಿನಿಮಯ ದರಗಳು ಮತ್ತು ಪಾವತಿ ಶಿಲ್ಕು ಇವುಗಳನ್ನೊಳಗೊಂಡ ಸ್ಥೂಲ ಆರ್ಥಿಕ ಬೆಳವಣಿಗೆಗಳ ವಿಶಾಲ ಶ್ರೇಣಿಯೊಂದರ ಮೇಲೆ ಮಹತ್ತರ ಪ್ರಭಾವವನ್ನು ಕೇಂದ್ರ ಬ್ಯಾಂಕುಗಳು ಬೀರಲು ಹಣ ನೀತಿ ಅವಕಾಶ ಮಾಡಿಕೊಡುತ್ತದೆ. ಆದರೆ ಇತರ ಆರ್ಥಿಕ ನೀತಿ ರೂಪಕ ಸಂಸ್ಥೆಗಳು ಮತ್ತು ನಿರ್ದಿಷ್ಟವಾಗಿ ಬಜೆಟ್ ಪ್ರಾಧಿಕಾರಗಳು ಕೂಡ ಆರ್ಥಿಕ ಬೆಳವಣಿಗೆಗಳ ಮೇಲೆ ವ್ಯಾಪಕ ಪ್ರಭಾವ ಹೊಂದಿರುತ್ತವೆ. ವಿವಿಧ ನೀತಿರೂಪಕ ಸಂಸ್ಥೆಗಳ ಪ್ರಾಥಮಿಕ ಜವಾಬ್ದಾರಿಗಳನ್ನು ಕುರಿತಂತೆ ಸರ್ಕಾರವೊಂದು ತಕ್ಕಮಟ್ಟಿಗೆ ಸ್ಪಷ್ಟವಾದ ಅರಿವು ಹೊಂದಿರದಿದ್ದರೆ ಆರ್ಥಿಕ ಸಾಧನೆ ಹಾನಿಗೊಳ್ಳುವ ಸಂಭವವಿದೆ.

ಕೇಂದ್ರ ಬ್ಯಾಂಕಿಗೆ ಸಂಬಂಧಪಟ್ಟಂತೆ ಒಂದು ಕಾಲಾವಧಿಯಲ್ಲಿ ಬೆಲೆಗಳ ಸ್ಥಾಯಿತ್ವಕ್ಕೆ ಅನುಕೂಲಕರವಾಗಿರುವಂಥ ಹಣಪರಿಸ್ಥಿತಿಗಳನ್ನು ಸ್ಥಾಪಿಸುವುದು ಅದರ ಪ್ರಾಥಮಿಕ ಜವಾಬ್ದಾರಿ ಎಂಬುದು ಮತ್ತು ದೀರ್ಘಕಾಲದಲ್ಲಿ ಉತ್ತಮ ಆರ್ಥಿಕ ಸಾಧನೆಯನ್ನು ಪ್ರವರ್ತಿಸುವ ಅತ್ಯಂತ ಪರಿಣಾಮಕಾರಿ ವಿಧಾನವೆಂಬುದನ್ನು ಮನಗಾಣಬೇಕು. ಈ ಜವಾಬ್ದಾರಿಯನ್ನು ಅನುಸರಿಸುವಾಗ, ಕೇಂದ್ರ ಬ್ಯಾಂಕು ಕಡಿಮೆ ಮತ್ತು ಸ್ಥಾಯಿ ಬಡ್ಡಿದರಗಳನ್ನು ಹಾಗೂ ವಿನಿಮಯ ದರ ಸ್ಥಿರತೆಯನ್ನು ಸಾಧಿಸುವ ಪರೋಕ್ಷವಾದ ಒಂದು ಪ್ರಬಲ ಶಕ್ತಿಯಾಗಿರುತ್ತದೆ. ತತ್ಪರಿಣಾಮವಾಗಿ ಒಂದು ನಡುಗಾಲದಲ್ಲಿ ಆರ್ಥಿಕ ಬೆಳವಣಿಗೆಯನ್ನು ಸಾಧಿಸಲು ಕೇಂದ್ರ ಬ್ಯಾಂಕಿಗೆ ಅತ್ಯಂತ ಪರಿಣಾಮಕಾರಿ ವಿಧಾನವನ್ನು ಹೆಚ್ಚು ಸ್ಥಿರವಾದ ಹಣಕಾಸಿನ ಮತ್ತು ಬೆಲೆಯ ಪರಿಸ್ಥಿತಿ ಒದಗಿಸುತ್ತದೆ. ಬೆಲೆ ಸ್ಥಾಯಿತ್ವವನ್ನು ಸಾಧಿಸುವುದು ಸುಲಭವಾದ ಕಾರ್ಯವೇನಲ್ಲ, ಏಕೆಂದರೆ ಅಲ್ಪಾವಧಿ ಮತ್ತು ಮಧ್ಯಮಾವಧಿ ಗುರಿಗಳ ನಡುವೆ ಅನಿವಾರ್ಯವಾದ ಘರ್ಷಣೆಗಳಿರುತ್ತವೆ. ಹಣ ಪ್ರಾಧಿಕಾರಗಳು ಅಂದಂದಿನ ಆಧಾರದ ಮೇಲೆ ತೀರ್ಮಾನಗಳನ್ನು ಮಾಡಬೇಕು ಮತ್ತು ಈ ತೀರ್ಮಾನಗಳು ಅನೇಕ ವೇಳೆ ದೇಶದ ಅಲ್ಪಕಾಲಿಕ ಆರ್ಥಿಕ ಬೆಳವಣಿಗೆಗಳ ಮೇಲೆ ಗಮನಾರ್ಹ ಪರಿಣಾಮವನ್ನುಂಟುಮಾಡುತ್ತವೆ.

ಹೆಚ್ಚು ದೀರ್ಘವಾದ ಅವಧಿಯಲ್ಲಿ ಬೆಲೆ ಸ್ಥಾಯಿತ್ವಕ್ಕೆ ಉತ್ತಮತರ ಆಧಾರವನ್ನು ಸ್ಥಾಪಿಸುವ ನೀತಿ ಕ್ರಮಗಳು ಮತ್ತು ಇದರ ಫಲವಾದ ಹೆಚ್ಚು ದೀರ್ಘವಾದ ಅವಧಿಯ ಬೆಳವಣಿಗೆಯ ಪ್ರತೀಕ್ಷೆಗಳು ಹಾಗೂ ಆರ್ಥಿಕ ನೀತಿಗಳ ಮೇಲೆ ಅಲ್ಪಾವಧಿಯಲ್ಲಿ ಆ ನೀತಿಕ್ರಮಗಳಿಂದಾಗುವ ನಕಾರಾತ್ಮಕ ಪರಿಣಾಮಗಳು—ಇವುಗಳಲ್ಲಿ ಒಂದನ್ನು ಆಯ್ಕೆಮಾಡುವುದೇ ಕೇಂದ್ರ ಬ್ಯಾಂಕು ಆಗಿಂದಾಗ್ಗೆ ಎದುರಿಸುವ ಉಭಯ ಸಂಕಟಗಳಲ್ಲಿ ಒಂದಾಗಿದೆ. ಹಣದುಬ್ಬರ ಮುಂದುವರಿಯುತ್ತಿರುವಾಗ ಉದರಿ ನಿರ್ಮಾಣವನ್ನು ಬಿಗಿಗೊಳಿಸುವ ಪ್ರಯತ್ನದಿಂದ ಬಡ್ಡಿದರಗಳು ಮೇಲಕ್ಕೇರುವ ಸಂಭವವಿದೆ ಮತ್ತು ಇದು ಪ್ರಾರಂಭದಲ್ಲಿ ಆರ್ಥಿಕ ಬೆಳವಣಿಗೆಯನ್ನು ನಿಧಾನಗೊಳಿಸಬಹುದು. ಆದರೆ ಕೇಂದ್ರ ಬ್ಯಾಂಕು ತನ್ನ ಪ್ರಾಥಮಿಕ ಜವಾಬ್ದಾರಿಯನ್ನು ಪೂರೈಸಬೇಕಾಗಿದ್ದಲ್ಲಿ ಈ ಅಲ್ಪಕಾಲಿಕ ನಕಾರಾತ್ಮಕ ಪರಿಣಾಮಗಳಿಂದಾಚೆಗೆ ನೋಡಲು ಮತ್ತು ಬೆಲೆ ಸ್ಥಾಯಿತ್ವದ ದೀರ್ಘಾವಧಿ ಗುರಿಯ ಮೇಲೆ ಗಮನ ಇಡಲು ಅದು ಸಮರ್ಥವಾಗಿರಬೇಕು.

ಒಂದು ಅವಧಿಯಲ್ಲಿ ಹಣದುಬ್ಬರವನ್ನು ನಿಯಂತ್ರಿಸಲು ತಾನು ಸಮರ್ಥವೆಂದು ಕೇಂದ್ರ ಬ್ಯಾಂಕು ತೋರಿಸಿಕೊಂಡಲ್ಲಿ ಆಗ ತೀವ್ರ ಅಲ್ಪಕಾಲಿಕ ಉಭಯ ಸಂಕಟಗಳನ್ನು ಎದುರಿಸುವ ಸಂಭವ ಕಡಿಮೆ ಎಂಬುದನ್ನು ಸದಸ್ಯ ದೇಶಗಳೊಂದಿಗಿನ ನಮ್ಮ ಅನುಭವ ಸೂಚಿಸುತ್ತದೆ. ಎಂದರೆ ಹಣದುಬ್ಬರದ ಒತ್ತಡಗಳನ್ನು ಹತ್ತಿಕ್ಕಲು ಅಲ್ಪಕಾಲದಲ್ಲಿ ತೆಗೆದುಕೊಂಡ ಕ್ರಮಗಳಿಂದ ಆರ್ಥಿಕ ಬೆಳವಣಿಗೆ ಮತ್ತು ಉದ್ಯೋಗದ ಮೇಲೆ ಉಂಟಾಗುವ ನಕಾರಾತ್ಮಕ ಪರಿಣಾಮಗಳನ್ನು ಸುಸ್ಥಾಪಿತವಾದ ಮತ್ತು ವಿಶ್ವಸನೀಯ ಕೇಂದ್ರ ಬ್ಯಾಂಕು

ಸಮರ್ಪಕವಾಗಿ ನಿವಾರಿಸಬಹುದು ಎಂದು ಹೇಳಿದಂತಾಗುತ್ತದೆ.

ಹಣ ನೀತಿನಿರ್ವಹಣೆ ಕುರಿತ ಸಾಧನಗಳು ಮತ್ತು ವಿಧಾನಗಳು ವಿದ್ವಾಂಸರ ವ್ಯಾಪಕ ಅಧ್ಯಯನಗಳ ವಿಷಯವಾಗಿದೆ ಮತ್ತು ಇವು ಆರ್ಥಿಕ ಪತ್ರಕರ್ತರ ಬಹುತೇಕ ದೈನಿಕ ಚರ್ಚೆಯಲ್ಲಿ ಕಾಣಿಸಿಕೊಳ್ಳುತ್ತವೆ. ಅಮೆರಿಕ ಸಂಯುಕ್ತ ಸಂಸ್ಥಾನದ ಫೆಡರಲ್ ರಿಸರ್ವ್ ವ್ಯವಸ್ಥೆಯ ಗವರ್ನರುಗಳ ಮಂಡಳಿಯ ಮಾಜಿ ಅಧ್ಯಕ್ಷರಾದ ಪಾಲ್‌ವಾಲ್ಕರ್ ಅವರು ಸೂತ್ರರೂಪದಲ್ಲಿ ಹೇಳಿರುವಂತೆ, ಅಂದಂದಿನ ವಾಸ್ತವ ನಿರ್ಣಯಗಳು ನಿಜಕ್ಕೂಬಹು ಸರಳವಾಗಿವೆ: 'ಕೊಳ್ಳಿರಿ ಇಲ್ಲವೆ ಮಾರಿರಿ.' ಅಂದರೆ, ದ್ರವತ್ವವನ್ನು ಸೃಷ್ಟಿಸಿ ಇಲ್ಲವೆ ದ್ರವತ್ವವನ್ನು ತಗ್ಗಿಸಿ. ಸರಳವೆಂದು ತೋರುವ ಆ ತೀರ್ಮಾನಗಳನ್ನು ಕೈಗೊಳ್ಳುವಲ್ಲಿ ಮಾಡಲಾಗುವ ವಿವೇಚನೆಗಳು ಬಹಳ ಸಂಕೀರ್ಣವಾಗಿವೆ ಮತ್ತು ರಾಷ್ಟ್ರೀಯ, ಸಾಂಸ್ಥಿಕ, ಆರ್ಥಿಕ ಪರಿಸ್ಥಿತಿಗಳಿಗನುಗುಣವಾಗಿ ದೇಶದಿಂದ ದೇಶಕ್ಕೆ ಇವು ಬದಲಾಗುತ್ತವೆ ಎಂಬುದು ಸ್ಪಷ್ಟ. ಉದಾಹರಣೆಗೆ ಅರ್ಥವ್ಯವಸ್ಥೆಯೊಂದರಲ್ಲಿಯ ವಿತ್ತೀಯ ಮತ್ತು ಹಣ ಮಾರುಕಟ್ಟೆಗಳ ಗಾತ್ರ ಮತ್ತು ಸಂರಚನೆ ಹಾಗೂ ಅವರ ಬ್ಯಾಂಕಿಂಗ್ ಸಂಸ್ಥೆಗಳ ಸ್ಪರ್ಧಾತ್ಮಕತೆ ಇವು ಕೂಡ ಮುಖ್ಯ ಅಂಶಗಳು.

ಹಣನೀತಿ ನಿರ್ಣಯಕಾರ್ಯ ಕುರಿತಂತೆ ಕೇಂದ್ರ ಬ್ಯಾಂಕಿನ ಸ್ವಾಯತ್ತತೆಯ ಪರಿಣಾಮಕಾರಿ ಮಟ್ಟದ ಮೇಲೆ ಅರ್ಥವ್ಯವಸ್ಥೆಯೊಂದರ ಸಾಂಸ್ಥಿಕ ಮತ್ತು ಆರ್ಥಿಕ ಸಂರಚನೆ ಮುಖ್ಯ ಪ್ರಭಾವ ಹೊಂದಿರುತ್ತದೆ. ಒಂದು ದೇಶದಲ್ಲಿ ಹಣಸಂಬಂಧಿ ಬೆಳವಣಿಗೆಗಳ ಮೇಲೆ ಕೇಂದ್ರ ಬ್ಯಾಂಕು ಬೀರಬಲ್ಲ ಪ್ರಭಾವದ ಮಟ್ಟ ಅರ್ಥವ್ಯವಸ್ಥೆಯ ಮುಕ್ತತೆ ಮತ್ತು ಬಂಡವಾಳದ ಚಲನಶೀಲತೆಗಳನ್ನು ಬಹು ಮುಖ್ಯವಾಗಿ ಅವಲಂಬಿಸುತ್ತದೆ ; ಇವು ಹಣ ನೀತಿಯನ್ನು ರೂಪಿಸುವಾಗ ಪರಿಗಣಿಸಬೇಕಾದ ಅಂಶಗಳು. ಆದರೆ ಕೇಂದ್ರೀಯ ನೀತಿಗಳ ಯಶಸ್ಸಿಗೆ ಇತರ ಪ್ರಭಾವಗಳು ಕೂಡ ನಿರ್ಣಾಯಕವಾಗಬಲ್ಲವು.

### ಇತರ ಪ್ರಭಾವಗಳು

ಅಂತರರಾಷ್ಟ್ರೀಯ ಹಣ ನಿಧಿಯ ಅನೇಕ ಸದಸ್ಯ ದೇಶಗಳ ಅನುಭವದಿಂದ ದೊರೆಯುವ ಒಂದು ಮುಖ್ಯ ಪಾಠವೆಂದರೆ, ಹಣ ಪ್ರಾಧಿಕಾರವೊಂದು ತನ್ನ ಉದ್ದೇಶಗಳನ್ನು ಸಾಧಿಸುವ ಸಾಮರ್ಥ್ಯವನ್ನು ಕುರಿತಂತೆ ರಾಜ್ಯಕೋಶೀಯ ನೀತಿ ಕೇಂದ್ರ ಪಾತ್ರ ವಹಿಸುತ್ತದೆ ಎಂಬುದು. ಬಹುಸಂಖ್ಯೆಯ ದೇಶಗಳಲ್ಲಿ ರಾಜ್ಯಕೋಶೀಯ ಕೊರತೆಯ ಹೆಚ್ಚಳದಿಂದಾಗಿ, ಆ ಕೊರತೆಗೆ ಹಣಕಾಸು ಪೂರೈಸಲು ಹಣ ಪ್ರಾಧಿಕಾರಗಳ ಮೇಲೆ ಹೆಚ್ಚಿನ ಒತ್ತಡ ಉಂಟಾಗಿದೆ. ಇದರಿಂದಾಗಿ ಹಣ ವಿನಿಮಯ ಮಾರುಕಟ್ಟೆಗಳು ಮತ್ತು ಹಣದುಬ್ಬರದ ಮೇಲೆ ಪರಿಣಾಮಗಳು ಉಂಟಾಗಿವೆ. ಅಲ್ಲದೆ, ಖರ್ಚುಗಳು ಹಾಗೂ ತೆರಿಗೆಗಳ ಸಂರಚನೆ ಇವನ್ನು ಕುರಿತ ರಾಜ್ಯಕೋಶೀಯ ಪ್ರಾಧಿಕಾರಗಳ ನಿರ್ಣಯಗಳು ಕೂಡ ಖಾಸಗಿ ವಲಯ ಉಳಿತಾಯಗಳ ಮಟ್ಟದ ಮೇಲೆ ಮತ್ತು ತನ್ಮೂಲಕ ಹಣ ನೀತಿ ನಿರ್ಣಯಗಳನ್ನು ಮಾಡುವ ಸಾಮಾನ್ಯಆರ್ಥಿಕ ವಾತಾವರಣದಮೇಲೆ ಪ್ರಭಾವ ಬೀರುತ್ತವೆ. ಹೀಗೆ ರಾಜ್ಯಕೋಶೀಯ ನೀತಿಯ ಸಾಧನೆಗೆ ಮತ್ತು ಹಣ ನೀತಿಯೊಂದಿಗೆ ಅದರ ಪರಸ್ಪರ ಸಂಬಂಧಕ್ಕೆ ತೀವ್ರ ಗಮನ ನೀಡಲು ಅಂತರರಾಷ್ಟ್ರೀಯ ಹಣ ನಿಧಿ ಅರಿತುಕೊಂಡಿದೆ. ಆದರ್ಶ ಸ್ಥಿತಿಯಲ್ಲಿ ಹಣ ನೀತಿ ಮತ್ತು ರಾಜ್ಯಕೋಶೀಯ ನೀತಿಗಳು ಪರಸ್ಪರ ಸಂಗತವಾಗಿರಬೇಕು. ಆದರೆ ಬಹುತೇಕ ದೇಶಗಳಲ್ಲಿ ಅನೇಕ ವೇಳೆ ಆದರ್ಶಕ್ಕಿಂತ ವಾಸ್ತವತೆ ಬಹುದೂರ.

ರಾಜ್ಯಕೋಶೀಯ ನೀತಿಯಿಂದಾಚೆಗೆ ಕೇಂದ್ರ ಬ್ಯಾಂಕು ತನ್ನ ಉದ್ದೇಶಗಳನ್ನು ಅನುಸರಿಸುವಲ್ಲಿ ಬಾಹ್ಯ ಆಘಾತಗಳಿಗೆ ಒಂದು ಅರ್ಥವ್ಯವಸ್ಥೆ ಎಷ್ಟರ ಮಟ್ಟಿಗೆ ತೆರೆದುಕೊಂಡಿದೆ ಎನ್ನುವುದನ್ನು ಅದರ ಸಾಮರ್ಥ್ಯ ಅವಲಂಬಿಸಿರುತ್ತದೆ. ಉದಾಹರಣೆಗೆ ಒಂದು ಅರ್ಥವ್ಯವಸ್ಥೆ ಒಂದೆರಡು ಮೂಲಭೂತ ಪದಾರ್ಥಗಳನ್ನು ಅವಲಂಬಿಸಿದರೆ (ಕಡಿಮೆ ಆದಾಯದ ಅಭಿವೃದ್ಧಿ ಶೀಲದೇಶಗಳಲ್ಲಿ ಇದು ಸಾಮಾನ್ಯ) ಸ್ಥಿರಹಣ ಪರಿಸ್ಥಿತಿಗಳನ್ನು ಕಾಪಾಡುವಲ್ಲಿ ಹಣ ಪ್ರಾಧಿಕಾರದ ಸಾಮರ್ಥ್ಯ ತೀವ್ರ ಸವಾಲಿಗೆ ಒಳಪಡಬಹುದು. ದೀರ್ಘಾವಧಿ ಬೆಲೆ ಸ್ಥಿರತೆಗೆ ಸಹಾಯಕವಾಗುವ ದ್ರವತ್ವ ಬೆಳವಣಿಗೆ ಮತ್ತು ಉದರಿ ಸೃಷ್ಟಿ ನೀತಿಯನ್ನು ಕೆಲವೊಮ್ಮೆ ಎರಡು ಮೂರು ವರ್ಷಗಳಷ್ಟು ಅಲ್ಪಾವಧಿಯಲ್ಲಿ ಜಾರಿಗೊಳಿಸುವುದು ಕಷ್ಟವಾಗಬಹುದು.

### ರಾಷ್ಟ್ರೀಯ ಹಣಕಾಸು ವ್ಯವಸ್ಥೆಗಳು

ದೀರ್ಘತರ ಅವಧಿಯ ಬೆಲೆ ಸ್ಥಿರತೆಯನ್ನು ಸಾಧಿಸುವ ಹಣ ನೀತಿಯ ನಿರ್ವಹಣೆ ದೇಶೀಯ ಹಣಕಾಸು ಸಂಸ್ಥೆಗಳ ಸ್ಥಿತಿಯನ್ನು ಕೂಡ ನಿರ್ಣಾಯಕವಾಗಿ ಅವಲಂಬಿಸಿರುತ್ತದೆ. ಪ್ರಾಧಿಕಾರಗಳು ವ್ಯಾಪಕ ನಷ್ಟಭಯ ಮತ್ತು ಹಣಕಾಸು ಸಂಸ್ಥೆಗಳ ದಿವಾಳಿತನವನ್ನು ಎದುರಿಸುತ್ತಿರುವಾಗ, ಸ್ವಾಯತ್ತ ಕೇಂದ್ರ ಬ್ಯಾಂಕುಗಳನ್ನು ಹೊಂದಿರುವ ದೇಶಗಳೂ ಸೇರಿದಂತೆ ಹಲವು ದೇಶಗಳಲ್ಲಿ ಹಣನೀತಿ ನಿರೂಪಣೆ ಮತ್ತಷ್ಟು ಜಟಿಲವಾಗುತ್ತದೆ. ಹಲವೊಮ್ಮೆ ಇಂತಹ ನಷ್ಟಭಯದ ಇರುವಿಕೆಯಿಂದಾಗಿ ಈ ನರಳುತ್ತಿರುವ ಸಂಸ್ಥೆಗಳಿಗೆ ಅಲ್ಪಾವಧಿಯಲ್ಲಿ ಕೇಂದ್ರ ಬ್ಯಾಂಕಿನ ವಿಶೇಷ ದ್ರವತ್ವ ಬೆಂಬಲ ಅಗತ್ಯವಾಗುತ್ತದೆ.

ಅಭಿವೃದ್ಧಿಶೀಲ ದೇಶಗಳು ಹಣಕಾಸು ಬಿಕ್ಕಟ್ಟುಗಳ ಅನುಭವದಿಂದ ಪಡೆದಿರುವ ಒಂದು ಮೂಲ ಪಾಠವೆಂದರೆ, ಹಣಕಾಸು ಸಂಸ್ಥೆಗಳ ಸಾಧನೆಗಾಗಿ ಕೇಂದ್ರ ಬ್ಯಾಂಕು ನೀಡುವ ಧ್ವನಿತ ಇಲ್ಲವೆ ವ್ಯಕ್ತ ಖಾತರಿಗಳನ್ನು ಬಿಗಿಯಾಗಿ ನಿಯಂತ್ರಿಸಬೇಕು ಎಂಬುದಾಗಿದೆ. ಅಂಥ ಖಾತರಿಗಳು ಜಾರಿಯಲ್ಲಿ ಇರುವಾಗ ಹಣಕಾಸು ಸಂಸ್ಥೆಗಳ ವಿನಿಯಮನ ಹಾಗೂ ಮೇಲ್ವಿಚಾರಣೆಯಲ್ಲಿ ಕೇಂದ್ರ ಬ್ಯಾಂಕು ಪಾತ್ರ ವಹಿಸುವುದು ಅವಶ್ಯವಾಗಿದೆ. ಅಂಥ ಮೇಲ್ವಿಚಾರಣೆಯನ್ನು ಪ್ರತ್ಯೇಕ ಅಭಿಕರಣವೊಂದು ನಿರ್ವಹಿಸಿದಾಗ್ಯೂ ಆ ಮೇಲ್ವಿಚಾರಣೆಯ ಗುಣ ಮತ್ತು ಗಹನತೆಗೆ ಕೇಂದ್ರ ಬ್ಯಾಂಕು ಸಾಕಷ್ಟು ಗಮನ ನೀಡಬೇಕು. ಅಮೆರಿಕ ಸಂಯುಕ್ತ ಸಂಸ್ಥಾನವೂ ಸೇರಿ ಹಲವು ದೇಶಗಳಲ್ಲಿ ನಾವು ಕಂಡಿರುವಂತೆ ಹಣಕಾಸು ಸಂಸ್ಥೆಗಳನ್ನು ಪರಿಣಾಮಕಾರಿಯಾಗಿ ಮೇಲ್ವಿಚಾರಣೆ ಅಥವಾವಿನಿಯಮನಕ್ಕೆ ಒಳಪಡಿಸದ ಸಂದರ್ಭಗಳಲ್ಲಿ ಆ ಸಂಸ್ಥೆಗಳಲ್ಲಿ ಅಗಾಧ ಹಣಕಾಸು ಸಮಸ್ಯೆಗಳನ್ನು ಉಂಟುಮಾಡುವ ಕಷ್ಟಗಳು ಉದ್ಭವಿಸಬಹುದು. ಕೆಲವು ಸಂದರ್ಭಗಳಲ್ಲಿ

---

# ಖಾಸಗಿ ಬ್ಯಾಂಕುಗಳ ಸ್ಥಿತಿ-ಗತಿ

[16ನೇ ಪುಟದಿಂದ ಮುಂದುವರಿದುದು]

ಸಿಬ್ಬಂದಿ, ಈ ತರಹದ ಎಲ್ಲ ಮುಗ್ಗಟ್ಟುಗಳಿದ್ದರೂ ಸಹ ಈ ಬ್ಯಾಂಕುಗಳು ಭಾರತೀಯ ಬ್ಯಾಂಕ್ ವ್ಯವಸ್ಥೆಯಲ್ಲಿ ತಮ್ಮ ಹೆಜ್ಜೆ ಗುರುತುಗಳನ್ನು ಮೂಡಿಸಿವೆ.

### ಮುಂದೇನು ?

ಉದರಿ ವಿಾಸಲು ಅನುಪಾತ (CRR), ಪರಿನಿಯತ ದ್ರವತ್ವ ಅನುಪಾತ(SLR)ಗಳಲ್ಲಿ ರಿಯಾಯತಿ, ಸರಕಾರ ಹಾಗೂ ಅದರ ಅಂಗಸಂಸ್ಥೆಗಳಿಂದ ಠೇವಣಿ ರೂಪದಲ್ಲಿ ಸಹಾಯಹಸ್ತ, ಸೇವಾಶುಲ್ಕ ಹಾಗೂ ಬಡ್ಡಿದರಗಳಲ್ಲಿ ಹೊಂದಾಣಿಕೆ ಇತ್ಯಾದಿಗಳಿಂದ ಖಾಸಗಿ ಬ್ಯಾಂಕುಗಳ ಭವಿಷ್ಯ ಉತ್ತಮಗೊಳ್ಳಬಹುದೇನೊ ?

ಕೆಲವು ಆರ್ಥಿಕ ಪರಿಣಿತರ ಪ್ರಕಾರ ಖಾಸಗಿ ಬ್ಯಾಂಕುಗಳಿಗೆ ಭಾರತದಲ್ಲಿ ಉಳಿಗಾಲವಿಲ್ಲ. ಹೀಗೇ ಆದರೆ ಅವು ಬಹುಕಾಲ ಬದುಕಲಾರವು.ಆದ್ದರಿಂದ, ಅವರ ದೃಷ್ಟಿಯಲ್ಲಿ, ಖಾಸಗಿ ಬ್ಯಾಂಕುಗಳನ್ನು

1. ದೊಡ್ಡ ಬ್ಯಾಂಕುಗಳಲ್ಲಿ ವಿಲೀನಗೊಳಿಸಬೇಕು ;
2. ಎರಡು ಅಥವಾ ಎರಡಕ್ಕಿಂತ ಹೆಚ್ಚು ಖಾಸಗಿ ಬ್ಯಾಂಕುಗಳು ಸೇರಿ ಒಂದು ಸಮರ್ಥ ಘಟಕವಾಗಿ ಮಾಡಬೇಕು ;
3. ಕ್ರಮೇಣ ಎಲ್ಲ ಖಾಸಗಿ ಬ್ಯಾಂಕುಗಳ ರಾಷ್ಟ್ರೀಕರಣವಾಗಬೇಕು.

ಆದರೆ ಈಗಾಗಲೇ ಬಿಳಿಯಾನೆಗಳಾಗುತ್ತಿರುವ ರಾಷ್ಟ್ರೀಕೃತ ಬ್ಯಾಂಕುಗಳ ಸಾಲಿಗೇ ಇವು ಸೇರಿದರೆ ಭಾರತದ ಬ್ಯಾಂಕಿಂಗ್ ವ್ಯವಸ್ಥೆಯ ಮೇಲಾಗುವ ಪರಿಣಾಮ ಅತೀ ಭೀಕರ. ಭಾರತದ ಇಡೀ ಬ್ಯಾಂಕಿಂಗ್ ವ್ಯವಸ್ಥೆಗೆ ಕಾಯಕಲ್ಪ ಚಿಕಿತ್ಸೆ ನೀಡಬೇಕಾಗಬಹುದೇನೋ ! ●

ಇದು ಹಣ ನೀತಿ ನಿರ್ವಹಣೆಗೆ ವಿಶೇಷವಾಗಿ ಕ್ಲಿಷ್ಟವಾದ ಸವಾಲುಗಳನ್ನು ಒಡ್ಡಬಹುದು.

ಅನೇಕ ದೇಶಗಳ ಅನುಭವದಿಂದ ಪಡೆಯಬಹುದಾದ ಅಷ್ಟೇ ಮುಖ್ಯವಾದ ಇನ್ನೊಂದು ಪಾಠವೆಂದರೆ, ಕೇಂದ್ರ ಬ್ಯಾಂಕಿನ ಅಥಾವೆ ಪಟ್ಟಿಯನ್ನು ಸರ್ಕಾರದ ಕ್ರಮಗಳಿಂದ ದುರ್ಬಲಗೊಳಿಸುವುದರಿಂದ ರಕ್ಷಿಸಬೇಕೆಂಬುದು. ಏಕೆಂದರೆ, ಶೋಧನ ಸಾಮರ್ಥ್ಯವಿಲ್ಲದ ಉದ್ಯಮಗಳನ್ನು ಅದು ಅಗತ್ಯವಾಗಿ ಬೆಂಬಲಿಸಬೇಕಾಗಿರುವುದರಿಂದ ಅಥವಾ ಅವುಗಳಿಗೆ ಕೇಂದ್ರ ಬ್ಯಾಂಕಿನಿಂದ ದೊಡ್ಡ ಮೊತ್ತದ ಸಾಲಗಳು ಬೇಕಾಗುವುದರಿಂದ ಋಣಸೇವೆಯ ತೊಂದರೆಗಳಿದ್ದ ದೇಶಗಳಿಗೆ ಮತ್ತು ಕೇಂದ್ರ ಬ್ಯಾಂಕು ಋಣದ ಸೇವೆಯನ್ನು ಅಗತ್ಯವಾಗಿ ಮಾಡುವ ಜವಾಬ್ದಾರಿಯನ್ನು ವಹಿಸಿಕೊಂಡಿರುವುದರಿಂದ, ಇದು ಬಹು ಪ್ರಯಾಸದಿಂದ ಪಡೆದ ಪಾಠವಾಗಿದೆ. ಮತ್ತೆ ಕೆಲವು ದೇಶಗಳಲ್ಲಿ ಕೇಂದ್ರ ಬ್ಯಾಂಕು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಖಾಸಗಿ ಮತ್ತು ಸರ್ಕಾರಿ ಉದ್ಯಮಗಳ ವಿನಿಮಯ ಕರಾರುಗಳನ್ನು ಖಾತರಿಗೊಳಿಸುವಲ್ಲಿತೊಡಗಿಕೊಂಡಿದ್ದರೆ, ವಿನಿಮಯ ಮಾರುಕಟ್ಟೆಗಳಲ್ಲಿ ಹಠಾತ್ ಬೆಳವಣಿಗೆಗಳು, ದಿನದಿನ ಆಧಾರದ ಮೇಲೆ ದ್ರವತ್ವದ ನಿರ್ವಾಣ ಮತ್ತು ಹಣಕಾಸು ಪರಿಸ್ಥಿತಿಗಳನ್ನು ನಿರ್ವಹಿಸುವಲ್ಲಿ ಕೇಂದ್ರ ಬ್ಯಾಂಕಿನ ಸ್ವಾತಂತ್ರ್ಯದ ಮೇಲೆ ನಾಟಕೀಯ ಪರಿಣಾಮ ಬೀರಿತ್ತು. ಜೊತೆಗೆ ಇದು ಕೇಂದ್ರ ಬ್ಯಾಂಕಿಗೆ ವಿತ್ತೀಯ ಹೊರೆಯನ್ನು ಹೊರಿಸಿತ್ತು. ಆದುದರಿಂದ, ಅಥಾವೆ ಪಟ್ಟಿಯಲ್ಲಿ ನಮೂದಾದ ಬದ್ಧತೆಗಳಿಗೆ ಹಣಕಾಸು ನೀಡಬೇಕಾಗಿ ಬರುವುದರಿಂದ ಕೇಂದ್ರ ಬ್ಯಾಂಕಿನ ಪರಿಚಾಲನಗಳು ಮುಕ್ತ ಮತ್ತು ಪಾರದರ್ಶಕವಾಗಿರಬೇಕೆಂಬುದು ಮುಖ್ಯ. ಇದರ ಜೊತೆಗೆ ರಾಜ್ಯ ಕೋಶೀಯ ಅಧಿಕಾರಿಗಳು ವಹಿಸಬೇಕಾದ ಜವಾಬ್ದಾರಿಗಳನ್ನು ಕೇಂದ್ರ ಬ್ಯಾಂಕು ತನ್ನದಾಗಿಸಿಕೊಳ್ಳದಂತೆ ರಕ್ಷಿಸಬೇಕಾಗಿದೆ.

ಹಣ ನೀತಿಯನ್ನು ನಿರ್ವಹಿಸುವಲ್ಲಿ ಕೇಂದ್ರ ಬ್ಯಾಂಕಿನ ಸಾಮರ್ಥ್ಯದ ಮೇಲೆ ಹಣಕಾಸು ವ್ಯವಸ್ಥೆಯ ದಕ್ಷತೆ ಮತ್ತು ಸ್ಪರ್ಧಾತ್ಮಕತೆಗಳು ಕೂಡ ಪರಿಣಾಮ ಬೀರುತ್ತವೆ. ಅನೇಕ ಕೈಗಾರಿಕಾ ಮತ್ತು ಅಭಿವೃದ್ಧಿಶೀಲ ದೇಶಗಳಲ್ಲಿಯ ಹಣಕಾಸು ವಲಯ ಸುಧಾರಣೆಗಳಿಗೆ ಇದು ಎಡೆಮಾಡಿಕೊಟ್ಟಿದೆ.

1 ಮಾರುಕಟ್ಟೆಪ್ರಕ್ರಿಯೆಗಳಿಗೆ ಹೆಚ್ಚಿನ ಸ್ವಾತಂತ್ರ್ಯ ಮತ್ತು ಹೆಚ್ಚಿನ ಸ್ಪರ್ಧೆಯ ಮೂಲಕ, ಸಂಪನ್ಮೂಲ ಹಂಚಿಕೆಯಲ್ಲಿ ದಕ್ಷತೆಯೂ

2 ದೇಶೀಯ ಹಣಕಾಸು ವ್ಯವಸ್ಥೆಯ ಪ್ರವರ್ತನೆ ಮತ್ತು ಮಾರುಕಟ್ಟೆ ಆಧಾರಿತ ಬಡ್ಡಿದರಗಳ ಸಂರಚನೆಯೂ

ಈ ಸುಧಾರಣೆಗಳ ಗುರಿಗಳಾಗಿವೆ.

## ವೃತ್ತಿಪರ ತಳಹದಿ

ಕೇಂದ್ರ ಬ್ಯಾಂಕಿನ ಶಕ್ತಿ ಮತ್ತು ತನ್ನ ಕಾರ್ಯಭಾರಗಳನ್ನು ಯಶಸ್ವಿಯಾಗಿ ನಿರ್ವಹಿಸುವಲ್ಲಿ ಅದರ ಸಾಮರ್ಥ್ಯ, ಇವು ಹಲವು ಸಾಂಸ್ಥಿಕ ಅಂಶಗಳನ್ನು ಅವಲಂಬಿಸಿವೆ ಎಂಬುದನ್ನು ಅನೇಕ ದೇಶಗಳ ಅನುಭವ ಸೂಚಿಸುತ್ತದೆ. ದೇಶದ ಆರ್ಥಿಕ ಅನುಸ್ಥಾಪನೆಯಾಗಲಿ, ಅದರ ಕೇಂದ್ರ ಬ್ಯಾಂಕಿನ ಸ್ವಾಯತ್ತತೆಯ ವ್ಯಾಪ್ತಿಯಾಗಲಿ ಏನೇ ಇರಲಿ, ಅದನ್ನು ಲೆಕ್ಕಿಸದೆ, ಅದರ ಸಿಬ್ಬಂದಿ ಮತ್ತು ವ್ಯವಸ್ಥಾಪನ ವರ್ಗದ ವೃತ್ತಿಪರ ಗುಣಮಟ್ಟ ಮೊದಲನೆಯ ಅಂಶ. ಕೇಂದ್ರ ಬ್ಯಾಂಕಿಂಗ್ ಸಂಸ್ಥೆಗಳಿಗೆ ಐತಿಹಾಸಿಕ ಸ್ಮೃತಿಯೊಂದು ಅವಶ್ಯ ಎಂಬುದು ಎರಡನೆಯ ಅಂಶ. ಅವುಗಳ ಸಿಬ್ಬಂದಿ ಮತ್ತು ವ್ಯವಸ್ಥಾಪನದ ಗುಣ ಮತ್ತು ಸ್ಥಿರತೆಯನ್ನು, ಪರೀಕ್ಷಿತ ಮತ್ತು ಕಾರ್ಯಸಾಧ್ಯನೀತಿಗಳನ್ನು ಕುರಿತಂತೆ ಅವುಗಳ ಸಂಚಿತ ಅನುಭವವನ್ನು ಇದು ಭಾಗಶಃ ಅವಲಂಬಿಸಿದೆ. ರಾಜಕೀಯ, ವ್ಯಾವಹಾರಿಕ ಮತ್ತು ಶೈಕ್ಷಣಿಕ ಸಮುದಾಯಗಳಲ್ಲಿ ಹಣನೀತಿಯ ಬಗ್ಗೆ ಇರುವ ಆತ್ಮಾಭಿಮಾನದ ಅಲೆಗಳನ್ನು ಸುರಕ್ಷಿತವಾಗಿ ದಾಟಲು ಇದು ಅವಕ್ಕೆ ಸಹಾಯ ಮಾಡುತ್ತದೆ. ಮೂರನೆಯದಾಗಿ, ದೇಶಕ್ಕೆ ಸಂಬಂಧಿಸಿದಂತೆ ಆರ್ಥಿಕ ಅಂಕಿಅಂಶಗಳೇ ಅಲ್ಲದೆ ಆ ದೇಶದ ಸಾಂಸ್ಥಿಕ ಸಂರಚನೆಯ ಜ್ಞಾನದ ಗಟ್ಟಿಯಾದ ಅನುಭವಸಿದ್ಧ ಆಧಾರವನ್ನು ಹೊಂದಿರುವುದು ಕೇಂದ್ರ ಬ್ಯಾಂಕಿಗೆ ಮಹತ್ವಪೂರ್ಣದ್ದಾಗಿರುತ್ತದೆ.

## ಸಾರ್ವಜನಿಕ ಅರಿವು

ಕೇಂದ್ರ ಬ್ಯಾಂಕಿನ ಶಕ್ತಿ ಹಾಗೂ ಪರಿಣಾಮಕಾರಿತತ್ವಗಳಿಗೆ ನೆರವಾಗುವ ಇನ್ನೊಂದು ಮುಖ್ಯ ಅಂಶವೆಂದರೆ ಆ ಪಾತ್ರಕ್ಕೆ ಸಾರ್ವಜನಿಕ ಬೆಂಬಲ ಮತ್ತು ಆ ಪಾತ್ರದ ಅರಿವು. ಕೇಂದ್ರ ಬ್ಯಾಂಕು ಹೇಗೆ ಕಲಾಪ ನಡೆಸುತ್ತದೆ ಎಂಬುದನ್ನು ಮತ್ತು ಅದರ ಕ್ರಿಯೆಗಳಿಗೆ ಒಟ್ಟಾರೆ ಕಾರಣಗಳನ್ನು ಸಾರ್ವಜನಿಕರು ಅರಿಯುವ ಹಾಗೆ ಅದರ ಕಲಾಪಗಳು ತೆರೆದಿರಬೇಕು ಮತ್ತು ಪಾರದರ್ಶಕವಾಗಿರಬೇಕು ಎಂದು ಇದರ ಅರ್ಥ. ಅಂದಂದಿನ ನಿರ್ಣಯ ಕಾರ್ಯದಲ್ಲಿ ಸಾರ್ವಜನಿಕರು ತೊಡಗಿಕೊಂಡಿರಬೇಕೆಂದಾಗಲಿ, ಯಾವುದೇ ನಿರ್ದಿಷ್ಟ ಅವಧಿಯಲ್ಲಿ ಖರೀದಿಸುವ ಅಥವಾ ವಿಕ್ರಯಿಸುವ ನಿರ್ಣಯಗಳ ಮೇಲೆ ಪ್ರಭಾವ ಬೀರುವ ಎಲ್ಲ ಪರಿಸ್ಥಿತಿಗಳನ್ನು ಅರಿತಿರಬೇಕೆಂದಾಗಲಿ ಇದರ ಅರ್ಥವಲ್ಲ ಎಂಬುದು ಸ್ಪಷ್ಟ. ಏನೇ ಇರಲಿ, ಕೇಂದ್ರ ಬ್ಯಾಂಕು ತನ್ನ ಸಾರ್ವಜನಿಕ ಹೇಳಿಕೆಗಳ, ಪ್ರಕಟಣೆಗಳ ಮತ್ತು ರಾಜಕೀಯ ಕಾರ್ಯಗಳ ಇದಿರಿನಲ್ಲಿ ನೀಡುವ ಪ್ರಮಾಣಗಳ ಮೂಲಕ ಹಲವು ದೇಶಗಳಲ್ಲಿರುವಂತೆ ತೆರೆದಿರಬೇಕು ಮತ್ತು ಉತ್ತರದಾಯಿಯಾಗಿರಬೇಕು ಎಂಬುದು ಮುಖ್ಯ.

ಸರ್ಕಾರದೊಳಗಿನ ಇತರ ಸಂಸ್ಥೆಗಳಲ್ಲಿಯ ಆರ್ಥಿಕ ನೀತಿರೂಪಣ ಕಾರ್ಯವನ್ನು ಕುರಿತ ಸಾರ್ವಜನಿಕ ಚರ್ಚೆಗಳಲ್ಲಿ ಕೇಂದ್ರ ಬ್ಯಾಂಕ್ ಅಧಿಕಾರಿಗಳು ಕೂಡ ಪಾಲ್ಗೊಳ್ಳಬೇಕು. ಹೀಗೆ ಅಗತ್ಯವೆನಿಸಿದಂತೆ ರಾಜ್ಯಕೋಶೀಯ ನೀತಿಯನ್ನು ವಿಮರ್ಶಿಸುವ ಮತ್ತು ದೇಶದ ಆರ್ಥಿಕ ಭವಿಷ್ಯಕ್ಕೆ ಧಕ್ಕೆ ಉಂಟುಮಾಡಬಹುದಾದ ಇತರ ನೀತಿಗಳನ್ನು ವಿಮರ್ಶಿಸುವ ಸಾಮರ್ಥ್ಯಹೊಂದಿರುವ ಸ್ವಾತಂತ್ರ್ಯವನ್ನು ಕೇಂದ್ರ ಬ್ಯಾಂಕ್ ಪಡೆದಿರಬೇಕು. ಇದನ್ನು ಹಲವು ದೇಶಗಳಲ್ಲಿ ಇರುವಂತೆ ಸ್ವಲ್ಪ ಸಂವೇದನಶೀಲತೆಯಿಂದ ಮಾಡಬೇಕು ಎಂಬುದು ಸ್ಪಷ್ಟ. ತನ್ನ ವ್ಯವಹಾರಗಳ ನಿರ್ವಹಣೆಯನ್ನು ಕುರಿತಂತೆ ಅರ್ಥವ್ಯವಸ್ಥೆಯಲ್ಲಿ ಹಣ ಪ್ರಾಧಿಕಾರದ ಸಾಮರ್ಥ್ಯದ ಮೇಲೆ ಇತರ ಬೆಳವಣಿಗೆಗಳು ಹೇಗೆ ಪರಿಣಾಮ ಬೀರುತ್ತವೆ ಎಂಬುದರ ಸಾರ್ವಜನಿಕ ಅರಿವೇ ಅಲ್ಲದೆ ಕೇಂದ್ರ ಬ್ಯಾಂಕಿನ ಉದ್ದೇಶಗಳ ಮತ್ತು ಕಾರ್ಯವಿಧಾನಗಳ ಸಾರ್ವಜನಿಕ ಮಾನ್ಯತೆಯನ್ನು ಗಳಿಸುವ ಪ್ರಕ್ರಿಯೆಯ ಭಾಗ ಇದು ಆಗಿದೆ. ಆ ಸಾರ್ವಜನಿಕ ಅರಿವಿಲ್ಲದಿದ್ದರೆ ದೀರ್ಘಾವಧಿಯ ಆರ್ಥಿಕ ಬೆಳವಣಿಗೆಯ ಸಾಧನೆಯನ್ನು ಕುರಿತಂತೆ ಆರ್ಥಿಕ ನೀತಿ ರೂಪಣೆಯ ದೃಢ ಮುನ್ನಡೆಯನ್ನು ಕಾಪಾಡಿಕೊಳ್ಳುವುದು ಸರ್ಕಾರಕ್ಕೆ ಬಹಳ ಕಷ್ಟ ಎಂಬುದನ್ನು ಅಂತರರಾಷ್ಟ್ರೀಯ ಹಣ ನಿಧಿಯ ಅನುಭವ ತೋರಿಸುತ್ತದೆ.

## ಕೇಂದ್ರ ಬ್ಯಾಂಕಿನ ಸ್ವಾತಂತ್ರ್ಯ

ಅಲ್ಪಕಾಲೀನ ರಾಜಕೀಯ ಹಸ್ತಕ್ಷೇಪದಿಂದ ರಕ್ಷಣೆ ನೀಡಲು ಹಲವು ದೇಶಗಳು ತಮ್ಮ ಕೇಂದ್ರ ಬ್ಯಾಂಕುಗಳಿಗೆ ಕಾನೂನಿಕ ಮತ್ತು ಸಾಂಸ್ಥಿಕ ವ್ಯವಸ್ಥೆಗಳನ್ನು ಒದಗಿಸಿಕೊಡಲು ಪ್ರಯತ್ನಿಸುತ್ತಿವೆ. ಇದು ಒಂದು ಸ್ವಾಗತಾರ್ಹ ಬೆಳವಣಿಗೆ. ಕೇಂದ್ರಬ್ಯಾಂಕನ್ನು ಶಕ್ತ ಮತ್ತು ಪರಿಣಾಮಕಾರಿಯಾಗಿ ಮಾಡಲು, ಸರ್ಕಾರದಿಂದ ಅದು ಮುಕ್ತವಾಗಿರುವುದು ಒಂದು ಅವಶ್ಯವಾದ ಪರತ್ತಾಗಿರದಿದ್ದರೂ ಮತ್ತು ಖಂಡಿತವಾಗಿಯೂ ಅದು ಸಾಕಷ್ಟು ಎನಿಸದಿದ್ದರೂ, ಇದು ಗಮನಾರ್ಹ ಕೊಡುಗೆ ನೀಡಬಲ್ಲದು. ಅದರ ಜೊತೆಗೆ, ನಿರುಪಾಧಿಕ ಸ್ವಾತಂತ್ರ್ಯವೆಂಬುದೇ ಇಲ್ಲ. ಪ್ರಾಯೋಗಿಕವಾಗಿ ಹೇಳುವುದಾದರೆ ಕೇಂದ್ರ ಬ್ಯಾಂಕೊಂದು ನಿಡುಗಾಲದಲ್ಲಿ ತನ್ನ ಪಾತ್ರವನ್ನು ಎಷ್ಟು ಚೆನ್ನಾಗಿ ಖಚಿತಗೊಳಿಸಿಕೊಳ್ಳುತ್ತದೆ ಮತ್ತು ಸಾಧಿಸುತ್ತದೆ ಎಂಬುದನ್ನು ಸ್ವಾತಂತ್ರ್ಯದ ಪರಿಣಾಮಕಾರಿ ಪ್ರಮಾಣ ಮತ್ತು ಸಾರ್ವಜನಿಕ ಒಪ್ಪಿಗೆ ಇವು ಅವಲಂಬಿಸಿರುತ್ತವೆ.

ಯಶಸ್ವಿ ಹಣ ನೀತಿಯ ಪರಿಣಾಮದಿಂದ ಅಂತಿಮವಾಗಿ ರಾಜಕೀಯ ಮುಖಂಡನೊಬ್ಬನಿಗೆ ತೃಪ್ತಿಯಾಗಬಹುದಾದರೂ ಕೇಂದ್ರ ಬಾಂಕ್ಯು ಸ್ವತಂತ್ರ ಮಾರ್ಗ ಅನುಸರಿಸಿದಾಗ ಹತಾಶೆಯ ಕ್ಷಣಗಳು ಬರುತ್ತವೆ. ಹಲವು ವರ್ಷಗಳ ಹಿಂದೆ, ಅಮೆರಿಕ ಸಂಯುಕ್ತ ಸಂಸ್ಥಾನದ ಫೆಡರಲ್ ರಿಸರ್ವ್ ಮಂಡಲಿಯ ಅಧ್ಯಕ್ಷತೆಯಿಂದ ನಿರ್ಗಮಿಸುತ್ತಿದ್ದ

[20ನೇ ಪುಟ ನೋಡಿ

ಹತ್ತು ವರ್ಷಗಳ ಹಿಂದಿನ ಲೇಖನ

# ಬ್ಯಾಂಕಿನಲ್ಲಿ ಗ್ರಾಹಕರ ದೂರುಗಳೇಕೆ?

## ಬ್ಯಾಂಕುಗಳ ಮುಖ್ಯ ಮೂಲಧನವೆಂದರೆ ಜನರೇ—ಎಂಬ ಮಾತಿಗೆ ಆಧಾರವಾದ ಅನುಭವದ ಆಣಿಮುತ್ತುಗಳು

**ಎಚ್. ಜಿ. ಸೋಮಶೇಖರರಾವ್**

'ಗ್ರಾಹಕ ಯಾವಾಗಲೂ ಸರಿ'—'A customer is always right'—ಎಂಬ ಮಾತು ತುಂಬ ಅರ್ಥಗರ್ಭಿತ. ಈ ತತ್ತ್ವದ ಮೇಲೆ ಬ್ಯಾಂಕಿನಲ್ಲಿ ನಮ್ಮ ಮಾನವೀಯ ಸಂಬಂಧಗಳು ಹೊಸ ಅರ್ಥ ವ್ಯಾಪ್ತಿಯನ್ನು ಪಡೆಯುತ್ತವೆ. ಗ್ರಾಹಕರ ನಿಲುವು ಯಾವಾಗಲೂ ಸರಿ ಎನ್ನುವ ಮಾತು ಬ್ಯಾಂಕು ಮತ್ತು ಗ್ರಾಹಕರ ವ್ಯಾಪಕ ಸಂಬಂಧಗಳನ್ನೆಲ್ಲ ಒಳಗೊಂಡಿದೆ. ಹಾಗಾದರೆ ಗ್ರಾಹಕ ಏನು ಹೇಳಿದರೂ ಒಪ್ಪಿಕೊಳ್ಳಬೇಕೆ ?—ಎಂಬ ಪ್ರಶ್ನೆ ಉದ್ಭವಿಸುತ್ತದೆ. ಬ್ಯಾಂಕ್ ಮತ್ತು ಗ್ರಾಹಕರ ಸಂಬಂಧಗಳ ಸ್ಪಷ್ಟ ಕಲ್ಪನೆಯನ್ನು ತಿಳಿಯಲು ಈ ಮಾತು ಸಹಾಯಕವಾಗುತ್ತದೆ; ಮೇಲ್ನೋಟದ ಅರ್ಥದಲ್ಲಿ ಮಾತ್ರವೇ ಇದನ್ನು ನೋಡಬಾರದು.

ಒಂದು ವರ್ಗಕ್ಕೆ ಮೀಸಲಾಗಿದ್ದ ಬ್ಯಾಂಕುಗಳ ಕಾರ್ಯವ್ಯಾಪ್ತಿ ಈಗ ಎಲ್ಲರನ್ನೂ ಎಲ್ಲವನ್ನೂ ಮುಟ್ಟುವಂತಾಗಿದೆ. ಅದರಲ್ಲೂ ರಾಷ್ಟ್ರೀಕರಣವಾದ ಮೇಲೆ ಬ್ಯಾಂಕುಗಳು ಎಲ್ಲರ ಗಮನವನ್ನು ಸೆಳೆಯುತ್ತಿದ್ದು, ದಿನನಿತ್ಯ ಅವುಗಳ ಕಾರ್ಯ ಚಟುವಟಿಕೆಗಳು ಎಲ್ಲರಿಗೂ ಚರ್ಚೆಯ ವಿಷಯವಾಗಿವೆ. ಬ್ಯಾಂಕುಗಳ ಉದ್ದೇಶಗಳೇನು ? ಕರ್ತವ್ಯಗಳೇನು ?—ಎಂದು ಎತ್ತರದ ಧ್ವನಿಯಲ್ಲಿ ಜನಸಾಮಾನ್ಯರೂ ಕೇಳುತ್ತಿದ್ದಾರೆ.

ರಾಷ್ಟ್ರೀಕರಣದಿಂದ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಹೊಸ ಅಧ್ಯಾಯಪ್ರಾರಂಭವಾಗಿದೆ. ಅನೇಕ ಹೊಸ ಯೋಜನೆಗಳು ಬರುತ್ತಿವೆ. ಬ್ಯಾಂಕ್ ನೌಕರರಿಗೆ ಇವು ಒಂದು ಹೊಸ ಸವಾಲಾಗಿ ಪರಿಣಮಿಸಿವೆ. ಪಟ್ಟಣಗಳಿಗೇ ಸೀಮಿತವಾಗಿದ್ದ ಬ್ಯಾಂಕ್ ಶಾಖೆಗಳು ಇದುವರೆಗೂ ಲಾಭವನ್ನೇ ಮುಖ್ಯ ಉದ್ದಿಶ್ಯವಾಗಿ ಇಟ್ಟುಕೊಂಡಿದ್ದು ಜನಸಾಮಾನ್ಯರ ಸಂಪರ್ಕದಿಂದ ದೂರವಾಗಿದ್ದುವು. ರಾಷ್ಟ್ರೀಕರಣದ ಆನಂತರ ಬ್ಯಾಂಕಿನ ಸಿಬ್ಬಂದಿಯು ಸೇವೆ ಮತ್ತು ಕರ್ತವ್ಯಪರತೆಯನ್ನು ಮುಖ್ಯವಾಗಿಟ್ಟುಕೊಳ್ಳಬೇಕಾಗಿದೆ. ಬ್ಯಾಂಕು ಕೆಲಸ ಮಾಡುವ ಆವರಣದ ಸುತ್ತಲ ಜನಗಳಿಗೆ ಈ ನೌಕರರು ಮಿತ್ರರು, ಸಲಹೆಗಾರರು ಮತ್ತು ಮಾರ್ಗದರ್ಶಿಗಳಾಗಬೇಕಾಗಿದೆ. ಬ್ಯಾಂಕು ಕೇವಲ ವ್ಯಾಪಾರಿ ಸಂಸ್ಥೆಯಾಗಿ ಉಳಿಯದೆ ಅಭಿವೃದ್ಧಿಕಾರ್ಯಗಳತ್ತ ಮುಖ ಮಾಡಿದೆ. ಕೆಲಸಗಾರರು ತಮ್ಮ ಮನಃಪ್ರವೃತ್ತಿಗಳನ್ನು ಈ ಬದಲಾವಣೆಗೆ ಹೊಂದಿಸಿಕೊಳ್ಳಬೇಕು. ವ್ಯಕ್ತಿ ಸ್ವರೂಪವಿಲ್ಲದ ಮನೋಭಾವದಿಂದ ದೂರ ಹೋಗಿ ಬ್ಯಾಂಕ್ ನೌಕರರು ತಾವು ದೇಶಸೇವಕರೆಂಬುದನ್ನು ಅರಿತು ಗ್ರಾಹಕರೊಡನೆ ನಿಕಟ ಹಾಗೂ ಸೌಹಾರ್ದ ಸಂಪರ್ಕದ ಸೇತುವೆಯನ್ನು ಕಟ್ಟಬೇಕು. ಈಗ ಪ್ರಾರಂಭವಾಗಿರುವ ಹೊಸ ಶಕೆಯ ಹೊಸ ಸವಾಲುಗಳನ್ನು ತಮ್ಮ ಕೌಶಲದಿಂದ ಎದುರಿಸಬೇಕು.

ಬ್ಯಾಂಕಿನ ವ್ಯವಹಾರದಲ್ಲಿ ಮೂರು ನಿಯಮಗಳನ್ನು ಅಗತ್ಯವಾಗಿ ಪಾಲಿಸಬೇಕು : 1. ಪೂರ್ಣ ನಂಬಿಕೆ, 2. ಗೋಪ್ಯತೆ, 3. ಸುಲಭ ಕಾರ್ಯ ನಿರ್ವಹಣೆ. ಲೇವಾದೇವಿಗೆ ಸಂಬಂಧಿಸಿದ ಸೂಕ್ಷ್ಮವಾದ ವ್ಯವಹಾರವನ್ನು ಬ್ಯಾಂಕು ಒಳಗೊಂಡಿದೆ. ಅದಕ್ಕಾಗಿ ಲಾಭದ ಮೇಲಿನ ಕಣ್ಣನ್ನು ತೆಗೆದು ಸೇವಾ ಮನೋಭಾವವನ್ನು ಬೆಳೆಸಿಕೊಳ್ಳುತ್ತ ಕ್ರಾಂತಿಕಾರಕ, ಶಕ್ತಿಯುತ ಹಾಗೂ ಸ್ಪಷ್ಟವಾದ ಹೊಸ ಪ್ರಜ್ಞೆಯನ್ನು ತಂದುಕೊಳ್ಳಬೇಕಾಗಿದೆ. ರಾಷ್ಟ್ರೀಕರಣ ನಮ್ಮ ಎಲ್ಲಾ ಸಮಸ್ಯೆಗಳಿಗೂ ಉತ್ತರವಲ್ಲ; ಅದು ಒಂದು ಅದ್ಭುತ ಅವಕಾಶ ಅಷ್ಟೆ. ಸೇವೆಯ ಬುನಾದಿಯ ಮೇಲೆ ಕರ್ತವ್ಯ ನಿಷ್ಠರಾದ ನೌಕರರಿಂದ ರಾಷ್ಟ್ರೀಕರಣದ ಉದ್ದೇಶಗಳು ಸಫಲವಾಗುತ್ತವೆ. ಈಗ ಬ್ಯಾಂಕಿನ ಸೇವೆಗಳು ಸಮರ್ಪಕವಾಗಿಲ್ಲ ಮತ್ತುವೇಗಗತಿಯಲ್ಲಿ ಅವಕ್ಷೀಣಿಸುತ್ತಿವೆ ಎಂಬ ದೂರು ಎಲ್ಲ ಕಡೆ ಕೇಳಿಬರುತ್ತಿದೆ. ಬಹುಶಃ ಇದಕ್ಕೆ ಕಾರಣ ನೌಕರರಿಗೆ ಕೆಲಸದಲ್ಲಿ ಇರುವ ಭದ್ರತೆ. ಕೆಲಸ ಮಾಡಲಿ ಬಿಡಲಿ ಸಿಬ್ಬಂದಿ ಸಂಘಗಳೊಡನೆ ಮಾಡಿಕೊಳ್ಳುವ ಒಪ್ಪಂದದ, ಮೇರೆಗೆ ಮೇಲುದರ್ಜೆಗೆ ಸುಲಭವಾಗಿ ಅವರಿಗೆ ಬಡ್ತಿ ಸಿಗುತ್ತದೆ. ಶೀಘ್ರ ಹಾಗೂ ವಿನಯಪೂರಿತ ಸೇವೆಯ ಅಭಾವವೇ ಈ ದೂರುಗಳಿಗೆ ಕಾರಣ.

ಪಟ್ಟಣಗಳಲ್ಲಾಗಲಿ, ಹಳ್ಳಿಗಳಲ್ಲಾಗಲಿ ಬ್ಯಾಂಕುಗಳ ಮುಖ್ಯ ಮೂಲಧನ ಜನರೇ. ನಮ್ಮೆಲ್ಲ ವ್ಯವಹಾರಗಳೂ ನಡೆಯುವುದು ಆ ಜನರೊಡನೆ ಮತ್ತು ಅವರ ಹಣಕಾಸಿನೊಂದಿಗೆ.

### ಕೆಲವು ಘಟನೆಗಳು

ನಿಜವಾಗಿ ನಡೆದ ಕೆಲವು ಘಟನೆಗಳನ್ನು ಇಲ್ಲಿ ಉಲ್ಲೇಖಿಸಿದೆ. ವಿಷಯ ಎಷ್ಟೇ ಸಣ್ಣದಾದರೂ ಬ್ಯಾಂಕಿನಲ್ಲಿ ಗ್ರಾಹಕರ ಮನಸ್ಸಿಗೆ ಹೇಗೆ ಕಿರಿಕಿರಿ ಆಗುತ್ತದೆ ಎಂದು ತಿಳಿಯಲು ಇದು ಸಹಾಯಕವಾಗುತ್ತದೆ. ಬ್ಯಾಂಕಿಗೆ ಬರುವ ಗ್ರಾಹಕರು ಲೇವಣಿ

* 'ಬ್ಯಾಂಕಿಂಗ್ ಪ್ರಪಂಚ'ದ ಡಿಸೆಂಬರ್ ೧೯೮೦ರ ಸಂಚಿಕೆಯಲ್ಲಿ ಪ್ರಕಟವಾದ ಲೇಖನ

# ಕೇಂದ್ರ ಬ್ಯಾಂಕುಗಳ ಪಾತ್ರ

[19ನೇ ಪುಟದಿಂದ ಮುಂದುವರಿದುದು]

ಪಾಲ್‌ವೋಲ್ಕರ್‌ರವರ ಗೌರವಾರ್ಥನೀಡಿದ ಔತಣದಲ್ಲಿ ಮಾಜಿ ಅಧ್ಯಕ್ಷ ರೇಗನರು ಆಡಿದ ಹೊಗಳಿಕೆಯ ಅಭಿಮಾನದ ನುಡಿಗಳಲ್ಲಿ ಈ ಅಂಶ ವ್ಯಕ್ತಗೊಂಡಿತ್ತು. ಆದರೆ ಖಾಸಗಿ ವಲಯ ಮತ್ತು ಸರ್ಕಾರಗಳ ಮೂಲಕ ಸಾಗಿದ ಶ್ರೀ ವೋಲ್ಕರರ ವೃತ್ತಿಜೀವನವನ್ನು ಅಧ್ಯಕ್ಷ ರೇಗನ್ನರು ನವುರಾದ ಹಾಸ್ಯದೊಂದಿಗೆ ನಿರೂಪಿಸಿದರು. ಶ್ರೀ ವೋಲ್ಕರರು ತಮ್ಮ ಪದವಿ ಶಿಕ್ಷಣವನ್ನು ಮುಗಿಸಿದ ಮೇಲೆ ನ್ಯೂಯಾರ್ಕ್ ಫೆಡರಲ್ ರಿಸರ್ವ್ ಬ್ಯಾಂಕನ್ನು ಸೇರಿದ್ದರು ಮತ್ತು ಅಲ್ಲಿಂದ ಚೇಸ್ ಮನ್ಹಟನ್ ಬ್ಯಾಂಕಿಗೆ ಹೋಗಿ ಅಲ್ಲಿ ಡೇವಿಡ್ ರಾಕ್‌ಫೆಲ್ಲರವರ ಸಮ್ಮುಖದಲ್ಲಿ ಕಾರ್ಯ ನಿರ್ವಹಿಸಿದ್ದರು ಎಂಬುದನ್ನು ವಿವರಿಸಿದರು. ಅನಂತರ ಅವರು ಖಜಾನೆ ಇಲಾಖೆಗೆ ಹೋದರು ಮತ್ತು ಅಲ್ಲಿ ನಾನಾ ಸಂದರ್ಭಗಳಲ್ಲಿ ಕಾರ್ಯದರ್ಶಿಗಳಾದ ಡಿಲ್ಲಾನ್, ಫೌಲರ್, ಕೊನಾಲಿ ಮತ್ತು ಷ್ಯುಲ್ಟ್ಜರ ಸಮ್ಮುಖದಲ್ಲಿ ಕೆಲಸ ಮಾಡಿದರು. ಅಂತಿಮವಾಗಿ ಶ್ರೀ ವೋಲ್ಕರರು ಫೆಡರಲ್ ರಿಸರ್ವ್ ಬ್ಯಾಂಕ್ ಮಂಡಲಿಯ ಅಧ್ಯಕ್ಷರಾದರು. ಆ ಹುದ್ದೆಯಲ್ಲಿ ಪಾಲ್ ವೋಲ್ಕರರು ದೇವರೊಬ್ಬನಿಗೆ ಮಾತ್ರ ಉತ್ತರದಾಯಿ ಆಗಿದ್ದರು, ಎಂದು ಅಧ್ಯಕ್ಷ ರೇಗನ್ನರು ಹೇಳಿದರು. ●

ಇಡುವುದಕ್ಕೇ ಬರಲಿ. ಸಾಲ ಕೇಳುವುದಕ್ಕೇ ಬರಲಿ ತಮಗೆ ಸರಿಯಾದ ಗಮನವನ್ನು ಕೊಡಬೇಕೆಂದು ಅಪೇಕ್ಷಿಸುತ್ತಾರೆ. ಅದು ಸಹಜ. ಮುಖ ನೋಡಿ ಮಣೆ ಹಾಕುವ ಮನೋಭಾವ ಬ್ಯಾಂಕಿನಲ್ಲಿ ಸಲ್ಲ.

1 ಒಂದು ಶಾಖೆಗೆ ಇಳಿವಯಸ್ಸಿನ, ಬೆನ್ನು ಬಾಗಿದ, ಮುಖ ಸುಕ್ಕುಗಟ್ಟಿದ, ಸಾಮಾನ್ಯ ಉಡುಪು ಧರಿಸಿದ್ದ ಮುದುಕರೊಬ್ಬರು ಬಂದರು. ಬ್ಯಾಂಕಿನಲ್ಲಿ ಯಾರೂ ಅವರನ್ನು ಗಮನಿಸಲಿಲ್ಲ. ಮುದುಕರಿಗೆ ಏನೂ ತೋಚದೆ, ನೇರವಾಗಿ ಆ ಶಾಖೆಯ ಅಧಿಕಾರಿಯೊಬ್ಬರ ಬಳಿ ಹೋದರು. ಆ ಅಧಿಕಾರಿ ಅವರನ್ನು ಪ್ರೀತಿಯಿಂದ ಬರಮಾಡಿಕೊಂಡು, ಬಂದ ಕಾರಣವನ್ನು ಕೇಳಿದರು. ಆ ಮುದುಕರು ತುರ್ತಾಗಿ ನಗರ ಸಭೆಗೆ ತೆರಿಗೆ ಕಟ್ಟಬೇಕಾಗಿತ್ತು. ಆ ವ್ಯವಸ್ಥೆ ಬ್ಯಾಂಕಿನಲ್ಲಿ ಇರಲಿಲ್ಲ. ಆದರೂ ಆ ಅಧಿಕಾರಿ ಅವರ ಕಾಗದ ಪತ್ರಗಳನ್ನು ನೋಡಿದರು. ಆಗ ಗೊತ್ತಾಯಿತು, ಬಂದಿರುವ ಮುದುಕರು ಆ ಶಾಖೆಯ ಎದುರಿಗಿದ್ದ ಇಡೀ ಸಾಲುಸಾಲು ಮನೆಗಳ ಮಾಲೀಕರೆಂದು! ತೆರಿಗೆ ಕಟ್ಟಲು ವ್ಯವಸ್ಥೆ ಮಾಡಲಾಯಿತು. ಮುದುಕರಿಗೆ ಸಂತೋಷವಾಯಿತು. ಮನೆಯಲ್ಲಿ ಬಚ್ಚಿಟ್ಟಿದ್ದ ಹಣ ಹೊರಗೆ ಬಂತು. ಕೊಳೆಯಾಗಿದ್ದ ಮುದ್ದೆ ಮುದ್ದೆ ನೋಟುಗಳನ್ನು ಕಂತೆಯಾಗಿ ತಂದರು. ಮುಂದೆ ಏಳು ತಿಂಗಳಲ್ಲಿ ಅವರ ಖಾತೆಗೆ 3 ಲಕ್ಷ ರೂಪಾಯಿಗಳ ಜಮಾ ಆಯಿತು. ದೇಶದ ಅನೇಕ ಅಭಿವೃದ್ಧಿ ಕಾರ್ಯಗಳಿಗೆ ಈ ಹಣ ಉಪಯೋಗವಾಯಿತು. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ, ದೊಡ್ಡವರಿರಲಿ ಚಿಕ್ಕವರಿರಲಿ, ಬ್ಯಾಂಕಿಗೆ ಬರುವ ಪ್ರತಿಯೊಬ್ಬ ಗ್ರಾಹಕನೂ 'ಬಹು ಮುಖ್ಯ ವ್ಯಕ್ತಿ'.

2 ಇದೊಂದು ಸಣ್ಣ ವಿಷಯ : ಕೌಂಟರಿನಲ್ಲಿ ಹೆಚ್ಚು ಸಂಖ್ಯೆಯಲ್ಲಿ ಗ್ರಾಹಕರು ಸೇರಿದ್ದರು. ಕೆಲಸದ ಭರಾಟೆಯಲ್ಲಿ ನೌಕರರು ಅತ್ತಿತ್ತ ನೋಡುವುದೂ ಕಷ್ಟವಾಗಿತ್ತು. ಹಾಗಿದ್ದಾಗ ಒಬ್ಬ ಗ್ರಾಹಕರು ಒಂದು ಚೆಕ್ಕನ್ನು ತನ್ನ ಪಾಸ್ ಬುಕ್ಕಿನೊಂದಿಗೆ ನೌಕರನೊಬ್ಬನಿಗೆ ಕೊಟ್ಟರು. ಆ ಚೆಕ್ಕಿನ ಹಣ ಗ್ರಾಹಕರಿಗೆ ಮುಟ್ಟಿತು. ಗ್ರಾಹಕರು ತಮ್ಮ ಪಾಸ್ ಬುಕ್ಕನ್ನು ವಾಪಸ್ಸು ಕೇಳಿದರು. ನೌಕರ "ಈಗ ಬರೆಯುವುದಕ್ಕೆ ಸಾಧ್ಯವಿಲ್ಲ. ಇನ್ನೊಂದು ದಿನ ಬನ್ನಿ" ಅಂದ. ಗ್ರಾಹಕರು "ಬರೆಯಬೇಕಾದ್ದು ಒಂದೇ ಖರ್ಚಿನ ಬಾಬ್ತು. ಅದಕ್ಕೋಸ್ಕರ ನಾನು ಮತ್ತೊಮ್ಮೆ ಬರಬೇಕೆ ?" ಎಂದು ಕೇಳಿದರು. ನೌಕರ ಮುಖ ಸಿಂಡರಿಸಿದ. ಬುಕ್ಕಿನಲ್ಲಿ ಏನೋ ಅವಸರದಿಂದ ಗೀಚಿದ. ಕೌಂಟರಿನ ಹಿಂದಿನಿಂದ ಆ ಪಾಸು ಬುಕ್ಕನ್ನು ಮೇಲಕ್ಕೆ ಎಸೆದ. ಕೌಂಟರಿನ ನುಣುಪಾಗಿದ್ದ ಮೇಲ್ಭಾಗದಿಂದ ಆ ಪುಸ್ತಕ ಜಾರಿ ಕೆಳಕ್ಕೆ ಬಿದ್ದಿತು. ಗ್ರಾಹಕ ಗಲಿಬಿಲಿಯಾದ. ಸಿಟ್ಟು ಬಂದು "ನಾನು ಇಟ್ಟ ಹಣ ನನಗೆ ಕೊಡೋಕೆ ನಿಮ್ಮ ಮುಂದೆ ಕೈ ಮುಗಿದು ನಿಲ್ಲಬೇಕೆ ? ಸಾಕು, ನನ್ನ ಖಾತೆಯನ್ನು ಮುಚ್ಚಿಬಿಡಿ" ಎಂದ. ಇಲ್ಲಿ 'ನಗುತ್ತ ವ್ಯವಹರಿಸಿ'—'Smile and sell'—ಎನ್ನುವ ನೀತಿಯನ್ನು ಮರೆತದ್ದರಿಂದ ಗ್ರಾಹಕರಿಗೆ ಬೇಸರವಾಯಿತು. 'ನಗುನಗುತ್ತ ಸೇವೆ', 'Service with a smile' ಎನ್ನುವ ಮಾತು ಕೇವಲ ಪ್ರಚಾರವಾಗಿ ಉಳಿಯಿತು.

3 ಒಬ್ಬ ವ್ಯಕ್ತಿ ಖಾತೆಯನ್ನು ತೆಗೆಯಲು ಬ್ಯಾಂಕಿಗೆ ಬಂದರು. ಯಾವ ಖಾತೆ ಹೆಚ್ಚು ಉಪಯೋಗ ಎಂದು ತಿಳಿಯಲು ಬಯಸಿದರು. ಬ್ಯಾಂಕ್ ಸಿಬ್ಬಂದಿ ಅವರಿಗೆ ಅನುಕೂಲವಾಗುವಂಥ ಖಾತೆ ತೆಗೆಯಲು ಸಹಾಯ ಮಾಡಬೇಕಿತ್ತು. ಬದಲಾಗಿ, ಅಚ್ಚಾಗಿದ್ದ ಒಂದು ಕರಪತ್ರವನ್ನು ಕೌಂಟರಿನ ಮೇಲೆ ಎಸೆದುಬಿಟ್ಟ. ಪಾಪ, ಗ್ರಾಹಕ ಖಾತೆ ತೆರೆಯುವ ಇಚ್ಛೆಯಿಂದ ಆ ಪತ್ರದ ಹಾಳೆಗಳನ್ನು ತಿರುವಿದರು. ಅದರ ತುಂಬ ಅರ್ಥವಾಗದ ತಾಂತ್ರಿಕ ವಿವರಗಳು ! ಗ್ರಾಹಕ ಗೊಂದಲದಲ್ಲಿ ಬಿದ್ದು ತಲೆ ಕೆಡಿಸಿಕೊಂಡರು. ಏನೂ ತೋಚದೆ ಅತ್ತಿತ್ತ ನೋಡದೆ ನೆಟ್ಟಗೆ ಬ್ಯಾಂಕಿನಿಂದ ಹೊರಕ್ಕೆ ಹೋಗಿಬಿಟ್ಟರು. ಆಮೇಲೆ ಗೊತ್ತಾಯಿತು— ಆತ ಒಬ್ಬ ದೊಡ್ಡ ಎಣ್ಣೆ ವ್ಯಾಪಾರಿಯೆಂದು, ಮತ್ತು ಇನ್ನೊಂದು ಬ್ಯಾಂಕಿನಲ್ಲಿ ದೊಡ್ಡ ಮೊತ್ತದ ಠೇವಣಿ ಕೊಟ್ಟರೆಂದರು. ಈ ಗ್ರಾಹಕರನ್ನು ಕಳೆದುಕೊಂಡದ್ದು ಒಂದು ಕಡೆಗಿರಲಿ ; ಆತ ತನಗಾದ ಕೆಟ್ಟ ಅನುಭವವನ್ನು ತನಗೆ ಗೊತ್ತಿದ್ದ ಜನರಿಗೆಲ್ಲ ಹೇಳಿದ. ಆದರಿಂದ ಆ ಬ್ಯಾಂಕಿನ ಹಿತಕ್ಕೆ ತೀವ್ರ ಧಕ್ಕೆಯಾಯಿತು. ಎಷ್ಟು ಲಕ್ಷ ರೂಪಾಯಿ ಖರ್ಚು ಮಾಡಿ ಎಲ್ಲ ಕಡೆ ಜಾಹಿರಾತುಗಳನ್ನು ಹಾಕಿದರೆ ತಾನೇ ಏನು ಪ್ರಯೋಜನ ?

4 ಒಬ್ಬ ದೊಡ್ಡ ಠೇವಣಿದಾರರು ತಮ್ಮ ಉಳಿತಾಯ ಖಾತೆಯ ಮೇಲೆ ಬೇರೆ ಯಾರಿಗೋ ಒಂದು ಚೆಕ್ಕು ಕೊಟ್ಟಿದ್ದರು. ಆ ಠೇವಣಿದಾರರು ಊರಿನ ಪ್ರಮುಖರು, ಸಮಾಜದಲ್ಲಿ ಪ್ರತಿಷ್ಠಿತರು. ಅವರು ಕೊಟ್ಟಿದ್ದ ಚೆಕ್ಕನ್ನು ಹಿಡಿದು ಬಂದ ವ್ಯಕ್ತಿ ಕೌಂಟರಿನ ಸರದಿಯಲ್ಲಿ ನಿಂತರು. ತಮ್ಮ ಸರದಿ ಬಂದಾಗ ಚೆಕ್ ಕೊಟ್ಟರು. ಆ ದಿನವೇ ಆ ಖಾತೆಯಲ್ಲಿ ದೊಡ್ಡ ಮೊತ್ತದ ಹಣ ಜಮ ಆಗಬೇಕಿತ್ತು. ನಿಗದಿ ಕಾಲದ ಠೇವಣಿಯಾಗಿ ಇಟ್ಟಿದ್ದ 3 ಲಕ್ಷ ರೂಪಾಯಿಗಳ ಮೇಲಿನ ಬಡ್ಡಿ. ಅದರ ದಾಖಲೆ ಅಂದು ಆಗದೆ ಉಳಿದಿತ್ತು. ನೌಕರ ಇದನ್ನು ಗಮನಿಸದೆ, ಖಾತೆದಾರನ ಮರ್ಯಾದೆಯನ್ನು ತಿಳಿಯದೆ ಯಾಂತ್ರಿಕವಾಗಿ ಆ ಚೆಕ್ಕನ್ನು ವ್ಯಕ್ತಿಯ ಮುಂದೆ ಎಸೆದು, "ಅಕೌಂಟಿನಲ್ಲಿ ದುಡ್ಡಿಲ್ಲಾರೀ... ಯಾವೋನ್ರಿ ಅವ್ನು ಚೆಕ್ಕು ಕೊಟ್ಟೋನು ?" ಎಂದು ಎತ್ತರದ ಧ್ವನಿಯಲ್ಲಿ ಕೇಳಿದ. ಮುಂದೆ ಏನಾಗಿರಬಹುದು ಎಂಬುದನ್ನು ಊಹಿಸಿಕೊಳ್ಳಬಹುದಲ್ಲವೇ ?

5 ಬ್ಯಾಂಕಿನ ವ್ಯವಹಾರ ಎಷ್ಟು ಸೂಕ್ಷ್ಮ! ಬ್ಯಾಂಕಿನಲ್ಲಿ ಕೆಲಸ ಮಾಡುವ ಪ್ರತಿಯೊಬ್ಬರೂ ತಾವು ಆಡುವ ಮಾತನ್ನು ತೂಕ ಹಾಕಿ ಆಡಬೇಕು. ಒಂದು ಸಾರಿ ಗ್ರಾಹಕರೊಬ್ಬರು ಬ್ಯಾಂಕಿಗೆ ಫೋನ್ ಮಾಡಿದರು. ಅಂದು ಬ್ಯಾಂಕಿನಲ್ಲಿ ಎಂದೂ ಇಲ್ಲದಷ್ಟು ಗಡಿಬಿಡಿ, ಗದ್ದಲ, ನೂಕು ನುಗ್ಗಲು. ಗ್ರಾಹಕರು ಫೋನ್‌ನಲ್ಲಿ ತಮ್ಮ ಖಾತೆಯ ಬಗ್ಗೆ ಏನನ್ನೋ ಕೇಳಲು ಬಯಸಿದ್ದರು. ಫೋನ್ ತೆಗೆದುಕೊಂಡ ಬ್ಯಾಂಕ್ ಸಿಬ್ಬಂದಿ, "ಈಗ ವಿಪರೀತ ಗಲಾಟೆ. ನೀವೇ ಬ್ಯಾಂಕಿಗೆ ಬಂದು ವಿಚಾರಿಸಿಕೊಂಡು ಹೋಗಿ" ಅಂದ. ತನ್ನ ಮೇಲಿದ್ದ ಕೆಲಸದ ಹೊರೆಯಿಂದ ತಲೆ ಕೆಡಿಸಿಕೊಂಡಿದ್ದ ನೌಕರ, ಆ ಗ್ರಾಹಕರು ಆಗಲೇ ತಮಗೆ ತಿಳಿಸಬೇಕೆಂದು ಮತ್ತೊಮ್ಮೆ ಹೇಳಿದಾಗ, "Hang on ! I will see" ಎಂದು ಹೇಳಿ, 10 ನಿಮಿಷಗಳ ಮೇಲೆ ಗಡುಸಾಗಿ, "ನಿಮ್ಮ ದುಡ್ಡು ಇನ್ನೂ ಪೋಸ್ಟ್ ಆಗಿಲ್ಲ. ಆದ ಮೇಲೆ ನಿಮ್ಮ ಅಕೌಂಟಿನಲ್ಲಿ ಡೆಬಿಟ್ ಮಾಡ್ತೀವಿ" ಎಂದು ಹೇಳಿ ಫೋನನ್ನು ದಢಕ್ಕನೆ ಇಟ್ಟುಬಿಟ್ಟ. ಇಲ್ಲಿ ನಿಮ್ಮ ಕಾಲದ ಜೊತೆಗೆ ಗ್ರಾಹಕರ ಕಾಲವನ್ನೂ ವ್ಯರ್ಥಮಾಡಿದಂತಾಯಿತು. ಅಷ್ಟೇ ಅಲ್ಲ, ಗ್ರಾಹಕರಿಗೆ ಅರ್ಥವಾಗದ ಬ್ಯಾಂಕಿಂಗ್ ಭಾಷೆಯಲ್ಲಿ ಉತ್ತರವನ್ನು ಹೇಳಿ ಮುಗಿಸಿದ್ದು ಗ್ರಾಹಕರ ಮನಸ್ಸಿನ ಮೇಲೆ ಏನು ಪರಿಣಾಮ ಮಾಡಿರಬೇಕು ? ಆ ಗ್ರಾಹಕರು ಮತ್ತೆ ಆ ಬ್ಯಾಂಕಿಗೆ ಬರಲೇ ಇಲ್ಲ.

ಪ್ರತಿಯೊಬ್ಬ ನೌಕರನೂ ತಾನು ಕೆಲಸ ಮಾಡುತ್ತಿರುವ ಸಂಸ್ಥೆಯನ್ನು ತನ್ನ ಈ ಕೆಲಸಗಳ ಮೂಲಕ ಪ್ರತಿನಿಧಿಸುತ್ತಾನೆ ಎಂಬುದು ಮುಖ್ಯ. ಬ್ಯಾಂಕ್ ನೌಕರರು ಹೆಚ್ಚು ವಿದ್ಯಾವಂತರೆಂಬುದು ಈ ಮಾತಿಗೆ ಇನ್ನಷ್ಟು ಅರ್ಥವನ್ನು ಕೊಡುತ್ತದೆ.

ಆಲ್ಫ್ರೆಡ್ ಟ್ಯಾಕ್ ಎಂಬವನು ಒಂದು ಸೊಗಸಾದ ತತ್ತ್ವವನ್ನು ನಮ್ಮ ಮುಂದಿಟ್ಟಿದ್ದಾನೆ. ಅದು ಏನೆಂದರೆ, "YOU—WE — I" ಅನ್ನುವುದು. ಇದನ್ನು "ನೀವು —ನಾವು—ನಾನು" ಎಂದು ಹೇಳಬಹುದು. ಇಲ್ಲಿ "ನೀವು" ಅಂದರೆ ನಮ್ಮ ಎಲ್ಲಾ ಕೆಲಸ ಕಾರ್ಯಗಳ ಮೂಲಧನವಾದ ಜನ—ಗ್ರಾಹಕರು ; "ನಾವು" ಎಂದರೆ ಬ್ಯಾಂಕಿಂಗ್ ಸಂಸ್ಥೆ ; ಮತ್ತು "ನಾನು" ಎಂದರೆ ಕೆಲಸಗಾರ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ್ದು ಗ್ರಾಹಕರನ್ನು ಮತ್ತು ಗ್ರಾಹಕರು ಪೋಷಿಸುವ ಸಂಸ್ಥೆಯನ್ನು ಎತ್ತರದ ಸ್ಥಾನದಲ್ಲಿಟ್ಟಿರುವುದು. ಆದ್ದರಿಂದ ಗ್ರಾಹಕರೇ ನಮ್ಮೆಲ್ಲ ಚಟುವಟಿಕೆಗಳ ಮೂಲ. ಅವರಿಗಾಗಿಯೇ ಸಂಸ್ಥೆ ಮತ್ತು ಅಲ್ಲಿಯ ನೌಕರರು; "ಎನಗಿಂತ ಕಿರಿಯರಿಲ್ಲ, ಗ್ರಾಹಕರಿಗಿಂತ ಹಿರಿಯರಿಲ್ಲ" ಎಂಬುದು ಪ್ರತಿ ಬ್ಯಾಂಕ್ ನೌಕರನ ದಿನನಿತ್ಯದ ಮಂತ್ರವಾಗಬೇಕು. ●

---

ನಮ್ಮದು ಇಬ್ಬಗೆಯ ನೀತಿ. ನಾವು ಇತರರಿಗೆ ಬೋಧಿಸುವುದು, ಆದರೆ ಅನುಸರಿಸದಿರುವಂಥದು ಒಂದು ; ನಾವು ಅನುಸರಿಸುವುದು, ಆದರೆ ಸಾಮಾನ್ಯವಾಗಿ ಇತರರಿಗೆ ಬೋಧಿಸದಿರುವಂಥದು ಇನ್ನೊಂದು.

ಬರ್ಟ್ರೆಂಡ್ ರಸೆಲ್

---

# ಬ್ಯಾಂಕ್ ವ್ಯವಸ್ಥಾಪಕ ಒಬ್ಬ ವ್ಯಕ್ತಿಯೆ?

**ಬ್ಯಾಂಕ್ ಶಾಖಾ ವ್ಯವಸ್ಥಾಪಕ ಒಬ್ಬ ವ್ಯಕ್ತಿಯೆ? ವ್ಯಕ್ತಿಯೆಂದರೆ ಹೇಗೆ? ಅಲ್ಲ ಎಂದರೆ ಏಕೆ? ಅವನು ವ್ಯಕ್ತಿಯಾದರೆ ಏನು ಮಾಡಲಾರ? ಆಗಿರದಿದ್ದೂ ಏನು ಮಾಡಬಲ್ಲ? ಕಾನೂನಿನ ಜಿಜ್ಞಾಸೆ. ಯುಕ್ತಿಯುಕ್ತ ವಾದ.**

**ಲಕ್ಷ್ಮೀನಾರಾಯಣಪ್ಪ**
**ಶಿರಸ್ತೇದಾರ್, ತಾಲ್ಲೂಕು ಕಛೇರಿ**
**ಹಾಸನ ತಾಲ್ಲೂಕು**

ಯಾವುದೇ ಶಾಖೆಯಲ್ಲಿ ಕಾರ್ಯನಿರ್ವಹಿಸುವ ಬ್ಯಾಂಕಿನ ವ್ಯವಸ್ಥಾಪಕ ಒಬ್ಬ ವ್ಯಕ್ತಿಯೆ ? ಈ ಪ್ರಶ್ನೆ ಅನುಚಿತವೂ ಆಶ್ಚರ್ಯಚಕಿತವೂ ಆಗಿದೆ ಎಂದು ನಿಮಗೆ ಅನಿಸಬಹುದು. ಯಾರಾದರೂ ಈ ಪ್ರಶ್ನೆಗೆ ಹೌದು ಎಂದೇ ಉತ್ತರಿಸುವ ಸಾಧ್ಯತೆ ಹೆಚ್ಚು. ಏಕೆಂದರೆ ಬ್ಯಾಂಕಿನ ಒಂದು ಶಾಖೆಯ ವ್ಯವಹಾರಗಳನ್ನು ನೋಡಿಕೊಳ್ಳುವ ಜವಾಬ್ದಾರಿ ಇರುವ ಮನುಷ್ಯ ವ್ಯಕ್ತಿ ಅಲ್ಲವೆಂದು ಯಾರು ತಾನೆ ಹೇಳಿಯಾರು ? ಈ ಪ್ರಶ್ನೆ ಹಾಕಿದ ವ್ಯಕ್ತಿಗೆ ಸಾಮಾನ್ಯ ಜ್ಞಾನದ ಕೊರತೆ ಇದೆಯೆಂದೋ, ಅವನಿಗೆ ತಲೆ ಸರಿ ಇಲ್ಲವೆಂದೋ ಹಲವರು ಭಾವಿಸಬಹುದು. ಪ್ರಶ್ನೆ ಹಾಕಿದ ವ್ಯಕ್ತಿಯು ಪಾಡೇ ಇದಾದರೆ, ಇನ್ನು ಬ್ಯಾಂಕಿನ ವ್ಯವಸ್ಥಾಪಕ ಒಬ್ಬ ವ್ಯಕ್ತಿಯಲ್ಲ ಎಂದು ಉತ್ತರಿಸಿದರೆ ಅವನ ಗತಿ ಏನು ? ಖಂಡಿತವಾಗಿಯೂ ತಲೆ ಕೆಟ್ಟ ವ್ಯಕ್ತಿ ಈತ ಎಂದು ಪರಿಗಣಿಸುವ ಸಾಧ್ಯತೆ ಹೆಚ್ಚು. ವಾಸ್ತವವೆಂದರೆ ಬ್ಯಾಂಕಿನ ಒಂದು ಶಾಖೆಯ ವ್ಯವಸ್ಥಾಪಕ ನಿಜವಾಗಿಯೂ ಕಾನೂನು ದೃಷ್ಟಿಯಲ್ಲಿ ಒಬ್ಬ ಅಥವಾ ಒಂದು ವ್ಯಕ್ತಿಯಲ್ಲ. ಈ ವಿಚಾರ ನಿಮಗೆ ರುಚಿಸದಿರಬಹುದು ಅಥವಾ ಇದನ್ನು ನೀವು ಕೂಡಲೇ ಒಪ್ಪದಿರಬಹುದು. ಮುಂದಿನ ವಿಚಾರವನ್ನು ನೀವು ಪರಿಶೀಲಿಸಿದಲ್ಲಿ ಇದರ ಯಥಾರ್ಥತೆ ತಿಳಿಯುತ್ತದೆ.

## ಪ್ರಕೃತಿ ನಿಯಮ

ನಾವು ತಿಳಿದಿರುವಂತೆ ಮನುಷ್ಯಜಾತಿಗೆ ಸೇರಿದ ಸಕಲ ಅಂಗಾಂಗಗಳಿಂದ ಕೂಡಿದ ಜೀವಂತ ಕಾಯಕ್ಕೆ ವ್ಯಕ್ತಿ ಎಂದು ಕರೆಯುತ್ತೇವೆ. ಸರ್ವಾಂಗ ಸುಂದರ ಸುಂದರಿಯರು ವಿರಳವಾದರೂ ಅಪರೂಪವೇನಲ್ಲ. ಅತ್ಯಂತ ಸ್ಫುರದ್ರೂಪಿಗಳಲ್ಲದಿದ್ದರೂ ಎಲ್ಲ ಅಂಗಾಂಗಗಳನ್ನೂ ಸರಿಸುಮಾರಾಗಿ ಅವು ಇರಬೇಕಾದ ಪ್ರಮಾಣದಲ್ಲಿ ಹೊಂದಿರುವ ವ್ಯಕ್ತಿಗಳೇ ಹೆಚ್ಚು. ಅಂಗಾಂಗಗಳ ಪ್ರಮಾಣದ ವ್ಯತ್ಯಾಸದಿಂದಾಗಿ ಅಗತ್ಯ ರೀತಿಯ ಆಕಾರ ಅರ್ಥಾತ್ ವಿಕಾರ ಹೊಂದಿರುವವರನ್ನೂ ನಾವು ಕಾಣಬಹುದು. ಒಂದು ಅಥವಾ ಹೆಚ್ಚು ಅಂಗಗಳು ಇಲ್ಲದ ವಿಕಲಾಂಗರನ್ನೂ ನಾವು ದಿನನಿತ್ಯ ನೋಡುತ್ತೇವೆ. ಇವರೆಲ್ಲರೂ ವ್ಯಕ್ತಿಗಳೇ. ಜೀವವಿಲ್ಲದ ದೇಹ ವ್ಯಕ್ತಿಯಾಗಲಾರದು. ಅದು ಎಷ್ಟೇ ಸುಂದರ ಅಥವಾ ದೃಢವಾದರೂ ಶವವೇ. ಇದು ಪ್ರಕೃತಿ ನಿಯಮ. ಮನುಷ್ಯನ ಹೊರತಾದ ಇತರ ಪ್ರಾಣಿಗಳು ವ್ಯಕ್ತಿಗಳ ಸಾಲಿಗೆ ಸೇರುವುದಿಲ್ಲ. ಇದು ಮಾನವನ ಕಪೋಲಕಲ್ಪಿತ ವ್ಯಾಖ್ಯೆ.

## ನಿಘಂಟಿನ ಅರ್ಥ

ವ್ಯಕ್ತಿ ಎಂಬ ಪದಕ್ಕೆ ನಿಘಂಟೂ ಸಹ ಪ್ರಕೃತಿ ನಿಯಮದ ಅರ್ಥವನ್ನೇ ಪ್ರಧಾನವಾಗಿ ತೆಗೆದುಕೊಳ್ಳುತ್ತದೆ. ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ 'ಸಂಕ್ಷಿಪ್ತ ಕನ್ನಡ ನಿಘಂಟು' ಒದಗಿಸುವ ಅರ್ಥ ಎರಡು ತೆರನಾದದ್ದು–ಸ್ಪಷ್ಟವಾಗಿ ತೋರಿಬರುವಿಕೆ, ನಿಚ್ಚಳವಾಗಿ ಕಾಣಿಸಿಕೊಳ್ಳುವಿಕೆ ಎಂಬುದು ಒಂದಾದರೆ, ಮನುಷ್ಯ, ಆಸಾಮಿ ಎಂಬುದು ಇನ್ನೊಂದು ಅರ್ಥ. ನಿಘಂಟಿನ ಪ್ರಕಾರವೂ ಸಹ ಪ್ರಕೃತಿ ನಿಯಮದ ಅರ್ಥವೇ! ಅಂದರೆ ಜೀವಂತ ಮಾನವನೇ ವ್ಯಕ್ತಿ ಎನಿಸಿಕೊಳ್ಳುತ್ತಾನೆ. ಹೀಗೆ ನಿಘಂಟನಲ್ಲಿ 'ಆಸಾಮಿ' ಮಾತ್ರ ಒಬ್ಬ ವ್ಯಕ್ತಿ.

## ಸಂವಿಧಾನದಲ್ಲಿ ವ್ಯಕ್ತಿ

ವ್ಯಕ್ತಿ ವಿಷಯದಲ್ಲಿ ಕಾನೂನಿನ ಅಭಿಮತ ಏನೆನ್ನುವುದನ್ನು ಪರಿಶೀಲಿಸೋಣ. ನಮ್ಮ ಎಲ್ಲ ಕಾನೂನುಗಳಿಗೂ ತಾಯಿಯೆನಿಸಿದ ಸಂವಿಧಾನದಲ್ಲಿ ವ್ಯಕ್ತಿ ಎಂಬ ಪದಕ್ಕೆ ಎಲ್ಲಾ ಅರ್ಥವಿವರಣೆ ಕಾಣಬರುವುದಿಲ್ಲ. ಆದರೆ ವ್ಯಕ್ತಿಸ್ವಾತಂತ್ರ್ಯವನ್ನು ಒದಗಿಸಿರುವ ಈ ಸಂವಿಧಾನವೂ ಕೂಡ ವ್ಯಕ್ತಿ ಎಂದರೆ ನಿಘಂಟಿನ ಅರ್ಥವನ್ನೇ ರೂಢಿಸಿಕೊಂಡಿದೆ ಎಂದರೆ ತಪ್ಪಾಗಲಾರದು. ಮನುಷ್ಯರಿಗೆ ಮಾತ್ರ ವ್ಯಕ್ತಿ ಸ್ವಾತಂತ್ರ್ಯ ಒದಗಿಸುವುದರ ಮೂಲಕ ಇತರ ಪ್ರಾಣಿಗಳನ್ನು ಅದು ವ್ಯಕ್ತಿ ಎಂದು ಮಾನ್ಯ ಮಾಡುವುದಿಲ್ಲ. ಕಾರಣ, ಅದು 'ಆಸಾಮಿ'ಗಳಿಂದಲೇ ನಿರ್ಮಿತವಾದುದು.

## ಸಾಮಾನ್ಯ ಅರ್ಥಗಳ ಅಧಿನಿಯಮ

ವ್ಯಕ್ತಿ ಎಂಬ ಪದಕ್ಕೆ 'ಮನುಷ್ಯ' ಎಂಬುದಕ್ಕಿಂತ ಹೆಚ್ಚಿನ ವ್ಯಾಪ್ತಿಯು ಸಾಮಾನ್ಯ ಅರ್ಥಗಳ ಅಧಿನಿಯಮ (ಜನರಲ್ ಕ್ಲಾಸಸ್ ಆಕ್ಟ್)ದಲ್ಲಿ ವ್ಯಕ್ತವಾಗಿದೆ. ಇದರ 3ನೇ ಪ್ರಕರಣದ 42ನೇ ಉಪಪ್ರಕರಣದಲ್ಲಿ 'ವ್ಯಕ್ತಿಗಳು' ಎಂಬುದು ನಿಗಮಿತವಾದ (ಇನ್‌ಕಾರ್ಪೊರೇಟೆಡ್) ಅಥವಾ ನಿಗಮಿತಗೊಳ್ಳದ ಕಂಪನಿ ಅಥವಾ ಸಂಘ (ಅಸೋಸಿಯೇಷನ್) ಅಥವಾ ವ್ಯಕ್ತಿಗಳ ಕಾಯವನ್ನೂ (ಬಾಡಿ ಆಫ್ ಇಂಡಿವಿಜುಯಲ್ಸ್) ಒಳಗೊಳ್ಳುತ್ತದೆ ಎಂದಿದೆ. ಅಂದರೆ ನಿಘಂಟಿನ ಅರ್ಥವಾದ ಮನುಷ್ಯನ ಜೊತೆಗೆ ಅಂತಹ ಒಂದಕ್ಕಿಂತ ಹೆಚ್ಚು ಜನರು ಸೇರಿ ಕಟ್ಟಿಕೊಳ್ಳುವ ಸಂಘಗಳೂ ವ್ಯಕ್ತಿಯ ಗುಂಪಿಗೆ ಸೇರುತ್ತವೆ. ಪಾಲುದಾರಿಕೆ ಸಂಸ್ಥೆ (ಪಾರ್ಟ್‌ನರ್‌ಶಿಪ್ ಫರ್ಮ್), ಜಂಟಿ ಬಂಡವಾಳ ಕಂಪನಿ (ಜಾಯಿಂಟ್ ಸ್ಟಾಕ್ ಕಂಪನಿ) ಮತ್ತು ಇತರ ಸಂಘ ಸಂಸ್ಥೆಗಳು ವ್ಯಕ್ತಿ ಎಂದು ಪರಿಗಣಿಸಲ್ಪಡುತ್ತವೆ. ಈ ಅರ್ಥದಲ್ಲಿ ಸರ್ಕಾರವೂ ಒಂದು ವ್ಯಕ್ತಿ. ಅಂದರೆ ಒಬ್ಬ ಮನುಷ್ಯ, ಕುಟುಂಬ, ಒಂದು ಸಂಸ್ಥೆ, ಕೆಲವು ಜನಗಳ ಒಂದು ಒಕ್ಕೂಟ. ಹಲವು ಜನಗಳ ಒಕ್ಕೂಟ, ಒಕ್ಕೂಟಗಳ ಒಕ್ಕೂಟ, ಒಂದು ಸರ್ಕಾರ ಇವು ಎಲ್ಲವೂ ವ್ಯಕ್ತಿ ಎಂಬ ಪದದ ವ್ಯಾಪ್ತಿಗೇ ಬರುತ್ತವೆ.

## ವರಮಾನ ತೆರಿಗೆ ಅಧಿನಿಯಮ

ವರಮಾನ ತೆರಿಗೆ ಅಧಿನಿಯಮ ವ್ಯಕ್ತಿ ಎಂಬ ಪದದ ವಿವರಣೆಯನ್ನು ಇನ್ನಷ್ಟು ವಿಶದವಾಗಿ ನೀಡುತ್ತದೆ. ಇದರ ಪ್ರಕಾರ ವ್ಯಕ್ತಿ ಎಂದರೆ ಒಬ್ಬ ಮನುಷ್ಯ, ಒಂದು ಹಿಂದೂ ಅವಿಭಕ್ತ ಕುಟುಂಬ, ಒಂದು ಗುಂಪು (ಕಂಪನಿ), ಒಂದು ಸಂಸ್ಥೆ (ಫರ್ಮ್), ಹಲವು ವ್ಯಕ್ತಿಗಳಿಂದ ರಚಿತವಾದ ನಿಗಮಿತ ಅಥವಾ ಅನಿಗಮಿತ ಸಂಘ ಅಥವಾ ಕಾಯ, ಒಂದು ಸ್ಥಳೀಯ ಪ್ರಾಧಿಕಾರ ಮತ್ತು ಇದಾವುದಕ್ಕೂ ಒಳಪಡದ ಪ್ರತಿಯೊಂದು ಕೃತಕ ನ್ಯಾಯಿಕ ವ್ಯಕ್ತಿ. ಉದಾಹರಣೆ: ಕಾನೂನು ಪ್ರಕಾರ ಸ್ಥಾಪಿಸಿದ ಸಂಸ್ಥೆ (ಕಾರ್ಪೊರೇಶನ್), ತಿರುಪತಿಯಂತಹ ದೇವತೆ. ಸಾಮಾನ್ಯ ಅರ್ಥಗಳ ಅಧಿನಿಯಮಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗಿ ವರಮಾನ ತೆರಿಗೆ ಅಧಿನಿಯಮ ಸ್ಥಳೀಯ ಪ್ರಾಧಿಕಾರ ಮತ್ತು ದೇವಸ್ಥಾನ ಮುಂತಾದುವನ್ನೂ ವ್ಯಕ್ತಿ ಎಂಬ ಪದದ ವ್ಯಾಖ್ಯೆಗೆ ಒಳಪಡಿಸಿದೆ.

## ಪಾಲುದಾರಿಕೆ ಅಧಿನಿಯಮ

ಪಾಲುದಾರಿಕೆ ಅಧಿನಿಯಮ ಪಾಲುದಾರಿಕೆ ಸಂಸ್ಥೆಯನ್ನು ಒಂದು ವ್ಯಕ್ತಿಯಾಗಿ ಪರಿಗಣಿಸಿದೆ. ಪಾಲುದಾರಿಕೆ ಸಂಸ್ಥೆಯ ನೋಂದಣಿಗೆ ಕಾನೂನು ಅವಕಾಶ ಕಲ್ಪಿಸಿದೆ. ಆದರೆ ಅದನ್ನು ಕಡ್ಡಾಯ ಮಾಡಿರುವುದಿಲ್ಲ. ಕಾನೂನಿನಂತೆ ನೋಂದಾಯಿತ

ಸಂಸ್ಥೆಗಳು ಇತರರ ವಿರುದ್ಧ ನ್ಯಾಯಾಲಯದಲ್ಲಿ ದಾವಾ ಹೂಡಬಹುದು. ಆದರೆ ನೋಂದಣಿಯಾಗದ ಸಂಸ್ಥೆಗಳಿಗೆ ಈ ಅಧಿಕಾರ ಇರುವುದಿಲ್ಲ. ವಿಚಿತ್ರವೆಂದರೆ ನೋಂದಣಿಯಾದ ಮತ್ತು ನೋಂದಣಿಯಾಗದ ಸಂಸ್ಥೆಗಳೆರಡರ ವಿರುದ್ಧವೂ ಇತರ ವ್ಯಕ್ತಿಗಳು ನ್ಯಾಯಾಲಯದಲ್ಲಿ ದಾವ ಹೂಡಬಹುದು. ಈ ರೀತಿ ನೋಂದಣಿಯಾಗದ ಪಾಲುದಾರಿಕೆ ಸಂಸ್ಥೆಗಳು ಪಾಲುದಾರಿಕೆ ಅಧಿನಿಯಮದ ಅಡಿ ಏಕಮುಖ (ಒನ್‌ವೇ) ವ್ಯಕ್ತಿಗಳಾಗಿ ಪರಿಗಣಿಸಲ್ಪಟ್ಟಿವೆ. ಇತರರ ವಿರುದ್ಧ ಅವು ವ್ಯಕ್ತಿ ಅಲ್ಲದಿದ್ದರೂ ಇತರರಿಗೆ ಅವು ವ್ಯಕ್ತಿಗಳು. ಕಾನೂನಿನ ಅಡಿಯಲ್ಲಿ ಕಾಣಬರುವ ವಿಚಿತ್ರ ವ್ಯಕ್ತಿಗಳಿವು.

### ವ್ಯವಸ್ಥಾಪಕ ಸಂಸ್ಥೆಯ ಒಂದು ಅಂಗ

ಇನ್ನು ಬ್ಯಾಂಕಿನ ಶಾಖಾ ವ್ಯವಸ್ಥಾಪಕ ಒಬ್ಬ ವ್ಯಕ್ತಿಯೇ ಎಂಬುದನ್ನು ಈ ಹಿನ್ನೆಲೆಯಲ್ಲಿ ಪರಿಶೀಲಿಸೋಣ. ಮೇಲೆ ತಿಳಿಸಿದ ಯಾವ ಕಾನೂನೂ ಸಹ ಬ್ಯಾಂಕಿನ ಒಂದು ಶಾಖೆಯನ್ನಾಗಲಿ ಅದರ ಮುಖ್ಯಸ್ಥನಾದ ವ್ಯವಸ್ಥಾಪಕನನ್ನಾಗಲಿ ಒಂದು ವ್ಯಕ್ತಿ ಎಂದು ಪರಿಗಣಿಸಿರುವುದಿಲ್ಲ. ಆದರೆ ಒಂದು ಸಂಘ ಅಥವಾ ಸಂಸ್ಥೆ ವ್ಯಕ್ತಿಯಾಗಿ ಪರಿಗಣಿಸಲ್ಪಟ್ಟಿದೆ. ಅಂದರೆ ಸಂಪೂರ್ಣವಾಗಿ ಬ್ಯಾಂಕು ಅಥವಾ ಅದನ್ನು ನಡೆಸುವ ಸಂಸ್ಥೆ ಒಂದು ವ್ಯಕ್ತಿ ಆಗುತ್ತದೆ. ಇಡೀ ಸಂಸ್ಥೆಯೇ ಒಂದು ವ್ಯಕ್ತಿಯಾದರೆ ಅದರ ಒಂದು ಶಾಖೆ ಮತ್ತು ಆ ಶಾಖೆಯ ಮುಖ್ಯಸ್ಥನಾದ ವ್ಯವಸ್ಥಾಪಕನ ಸ್ಥಾನ ಏನೆಂದು ಊಹಿಸಬಹುದು. ಆ ಶಾಖೆ ಮತ್ತು ಅದರ ಮುಖ್ಯಸ್ಥ ಒಂದು ವ್ಯಕ್ತಿಯ ಸಂಪೂರ್ಣ ರೂಪವಾಗಿರದೆ ವ್ಯಕ್ತಿಯ ಒಂದು ಭಾಗವಾಗಿ ರೂಪುಗೊಳ್ಳುತ್ತವೆ, ಹಸ್ತ ಮತ್ತು ಬೆರಳು ಇದ್ದಂತೆ. ಈ ರೀತಿ ಬ್ಯಾಂಕಿನ ಒಂದು ಶಾಖಾ ವ್ಯವಸ್ಥಾಪಕ ಒಬ್ಬ ವ್ಯಕ್ತಿಯೇ ಆದರೂ ಈ ವ್ಯಕ್ತಿಯ ವ್ಯಕ್ತಿತ್ವ ಅವನ ವೈಯಕ್ತಿಕತೆಗೆ ಮಾತ್ರ ಸೀಮಿತವಾಗಿರುತ್ತದೆ. ಬ್ಯಾಂಕಿನ ವ್ಯವಸ್ಥಾಪಕ ಎಂದು ಪರಿಗಣಿಸುವಾಗ ವ್ಯವಸ್ಥಾಪಕ ಎಂಬುದು ವ್ಯಕ್ತಿಯ ಅರ್ಥಕ್ಕೆ ಒಳಪಡುವುದಿಲ್ಲ. ಇದೇ ರೀತಿ ಯಾವುದೇ ಸಂಘ,ಸಂಸ್ಥೆಯ ಯಾವುದೇ ಹುದ್ದೆ ಅದು ಎಷ್ಟೇ ಉನ್ನತ ಸ್ಥಾನವಾಗಿರಲಿ ಒಂದು ವ್ಯಕ್ತಿ ಎಂದು ಪರಿಗಣಿಸಲ್ಪಡುವುದಿಲ್ಲ. ಸರ್ಕಾರಿ ಹುದ್ದೆಗಳೂ ಇದಕ್ಕೆ ಹೊರತಾಗಿರುವುದಿಲ್ಲ.

### ವ್ಯವಸ್ಥಾಪಕನ ವಿರುದ್ಧ ದಾವೆ

ಸಂಘ ಸಂಸ್ಥೆಗಳಲ್ಲಿನ ಹುದ್ದೆಗಳು ವ್ಯಕ್ತಿಗಳೆಂದು ಪರಿಗಣಿಸಲ್ಪಡುವುದಿಲ್ಲವೆಂಬುದನ್ನು ನಾವು ಈವರೆಗೆ ಪರಿಶೀಲಿಸಿದೆವು. ವ್ಯಕ್ತಿಗಳಲ್ಲದವರ ವಿರುದ್ಧ ನ್ಯಾಯಾಲಯದಲ್ಲಿ ದಾವಾ ಹೂಡಲು ಬರುವುದಿಲ್ಲವೆಂಬುದನ್ನು ತಿಳಿದಿದ್ದೇವೆ ; ಆದರೆ ಸಂಘ ಸಂಸ್ಥೆಗಳ ಮತ್ತು ಸರ್ಕಾರದ ವಿವಿಧ ಹುದ್ದೆಗಳನ್ನು ಪ್ರತಿವಾದಿಗಳನ್ನಾಗಿ ಹೆಸರಿಸಿ ನ್ಯಾಯಾಲಯದಲ್ಲಿ ದಾವೆ ಹೂಡುವುದನ್ನು ನಾವು ನೋಡಿದ್ದೇವೆ. ಇದು ಹೇಗೆ ಸಾಧ್ಯ ? ಸರ್ಕಾರವೂ ಸೇರಿದಂತೆ ಸಂಘ ಸಂಸ್ಥೆಗಳು ಒಂದು ವ್ಯಕ್ತಿಯಾಗಿ ಅಗೋಚರವಾದವುಗಳು, ಕಾನೂನಿಗನುಸಾರ ನಿಗಮಿತವಾದವು. ಆದುದರಿಂದ ಅವುಗಳನ್ನು ಪ್ರತಿನಿಧಿಸಲು ಅವುಗಳ ದಿನನಿತ್ಯದ ಕಾರ್ಯಭಾರದ ಸಂಪೂರ್ಣ ಹೊಣೆ ಹೊತ್ತಿರುವ ಮುಖ್ಯ ಕಾರ್ಯದರ್ಶಿ, ವ್ಯವಸ್ಥಾಪಕ ನಿರ್ದೇಶಕರು ಮುಂತಾದವರನ್ನು ಪ್ರಥಮ ಪ್ರತಿವಾದಿಗಳನ್ನಾಗಿ ಹೆಸರಿಸಲಾಗುತ್ತಿದೆ. ತದನಂತರ ಯಾವ ಹಂತದ ಹುದ್ದೆಯಿಂದ ತಮಗೆ ನ್ಯಾಯ ದೊರಕಬೇಕೆಂದು ವಾದಿಗಳು ಅಪೇಕ್ಷಿಸಿರುತ್ತಾರೋ ಆ ಹುದ್ದೆಗಳನ್ನು ಕ್ರಮವಾಗಿ 2 ಮತ್ತು ಮುಂದಿನ ಕ್ರಮಾಂಕದ ಪ್ರತಿವಾದಿಗಳೆಂದು ಹೆಸರಿಸುತ್ತಾರೆ. ಪರಿಹಾರ ಅಥವಾ ಸೌಲಭ್ಯ ಒದಗಿಸಬೇಕಾಗಿರುವುದು ಸರ್ಕಾರ ಅಥವಾ ಸಂಸ್ಥೆ. ಇದರ ಕಾರ್ಯಾಚರಣೆಗೆ ಅವು ವಿವಿಧ ಹಂತದ ಹುದ್ದೆಗಳನ್ನು ಸೃಷ್ಟಿಸಿ ನೇಮಕ ಮಾಡಿ ಕಾರ್ಯ ನಿರ್ವಹಿಸುತ್ತಿರುತ್ತವೆ. ಆದುದರಿಂದ ಸರ್ಕಾರಿ ಸಂಸ್ಥೆಯ ಮುಖ್ಯ ಕಾರ್ಯನಿರ್ವಾಹಕರು ಪ್ರಥಮ ಪ್ರತಿವಾದಿ ಮತ್ತು ವಾದಿಗೆ ಪರಿಹಾರ ಸೌಲಭ್ಯ ದೊರಕಿಸಬೇಕಾದ ಹಂತದ ಅಧಿಕಾರಿ ಹುದ್ದೆಯ ಅನಂತರದ ಪ್ರತಿವಾದಿಗಳೂ ಆಗುತ್ತಾರೆ. ●

# ಬ್ಯಾಂಕಿಂಗ್ : ಇತಿಹಾಸ ನಿರ್ಮಾತೃಗಳು

**ಭಾರತದ ಪ್ರತಿಷ್ಠಿತ ಬ್ಯಾಂಕುಗಳ ಉಗಮದ ಹಿಂದೆ ಇದ್ದ ಚೇತನಗಳ ಅವಿರತ ದುಡಿಮೆ, ಕಾಣ್ಕೆಗಳು ನಮ್ಮ ಊಹೆಗೂ ನಿಲುಕದಂಥವು. ಕೆಲವು ಬ್ಯಾಂಕುಗಳ ಹೆಸರುಗಳೇ ನಮ್ಮ ಕುತೂಹಲವನ್ನು ಕೆಣಕುವಂಥವು.**


**ಕೆ. ಎನ್. ಮಹಾಬಲ**

ಅಧಿಕೃತ ಭಾಷೆಗಳ ವಿಭಾಗ
ಭಾರತೀಯ ಸ್ಟೇಟ್ ಬ್ಯಾಂಕ್
ಸ್ಥಳೀಯ ಪ್ರಧಾನ ಕಛೇರಿ
ಬೆಂಗಳೂರು


ದೇನಾ ಬ್ಯಾಂಕ್ ದೇಶದ ಪ್ರತಿಷ್ಠಿತ ಬ್ಯಾಂಕುಗಳಲ್ಲಿ ಒಂದು. ಈ ಬ್ಯಾಂಕಿಗೆ 'ದೇನಾ ಬ್ಯಾಂಕ್' ಎಂದು ಹೆಸರು ಬರಲು ಕಾರಣವೇನು ಎಂಬ ಕುತೂಹಲ ನನಗೆ. ಆ ಬ್ಯಾಂಕಿನ ಸ್ನೇಹಿತರು ಯಾರಾದರೂ ಭೇಟಿಯಾದಾಗ ಕೇಳೋಣವೆಂದುಕೊಂಡಿದ್ದೆ. ಅಷ್ಟರಲ್ಲಿ 1951ರ 'ಇನ್ಶ್ಯೂರೆನ್ಸ್ ಅಂಡ್ ಬ್ಯಾಂಕಿಂಗ್' ಪತ್ರಿಕೆ ನನಗೆ ಲಭ್ಯವಾಯಿತು. ಅದರಲ್ಲಿರುವ ಒಂದು ಲೇಖನದಿಂದ ದೇನಾ ಬ್ಯಾಂಕ್ ಹೆಸರಿನ ಗುಟ್ಟು ಒಡೆಯಿತು.

'ದೇನಾ' ಪದವು ಬ್ಯಾಂಕಿನ ಸಂಸ್ಥಾಪಕರಾದ ಸೇಠ್ ಪ್ರಾಣಲಾಲ್ ದೇವಕರಣ್ ನಾನ್‌ಜಿಯವರ ಕುಟುಂಬದ ಹೆಸರಿನಿಂದ ರೂಪುಗೊಂಡಿದೆ. ಬ್ಯಾಂಕಿನ ಹಳೆಯ ಹೆಸರು ದೇವಕರಣ್ ನಾನ್‌ಜಿ ಬ್ಯಾಂಕಿಗ್ ಕಂಪನಿ ಲಿಮಿಟೆಡ್ ಎಂದಿತ್ತು.

ಪ್ರಾಣಲಾಲ್ ದೇವಕರಣ್ ನಾನ್‌ಜಿಯವರದು ಬಹಳ ಪ್ರಸಿದ್ಧ ಸಾಹಸೋದ್ಯಮಿಗಳ ಕುಟುಂಬ. ಪ್ರಾಣಲಾಲರ ತಂದೆ ದೇವಕರಣ್ ನಾನ್‌ಜಿಯವರು 1879ರಷ್ಟು ಹಿಂದೆಯೇ ನೌಕಾ ಸಾರಿಗೆ ಉದ್ಯಮವನ್ನು ಸ್ಥಾಪಿಸಿದ ಸಾಹಸಿ. ಮುಂಬಯಿಯಿಂದ ಯೂರೋಪ್ ಖಂಡದ ಮಾರ್ಗದಲ್ಲಿ ವರ್ಷದಲ್ಲಿ 60ರಿಂದ 70 ಬಾರಿ ಹಡಗುಗಳನ್ನು ಬಾಡಿಗೆಗೆ ನೀಡುತ್ತಿದ್ದರು. ಮೊದಲ ಮಹಾಯುದ್ಧದ ಸಮಯದಲ್ಲಿ ಸರ್ಕಾರದ ಕೋರಿಕೆಯ ಮೇರೆಗೆ ಹಡಗುಗಳನ್ನು ಅವರಿಗೆ ಒಪ್ಪಿಸಿದ್ದರು. ಸೇಠ್ ಪ್ರಾಣಲಾಲ್‌ರವರು ತಮ್ಮ ಹದಿವಯಸ್ಸಿನಲ್ಲಿಯೇ ಈ ಕಂಪನಿಯ ವ್ಯವಹಾರಗಳನ್ನೆಲ್ಲ ನೋಡಿಕೊಳ್ಳುತ್ತಿದ್ದರು.

ಇದರ ಜೊತೆಗೆ ವಿಮಾ ಕಂಪನಿಗಳನ್ನು ನಡೆಸಿದ ಸೇಠ್ ಪ್ರಾಣಲಾಲ್‌ರವರು 1938ರಲ್ಲಿ ದೇವಕರಣ್ ನಾನ್‌ಜಿ ಬ್ಯಾಂಕಿಂಗ್ ಕಂಪನಿ ಲಿಮಿಟೆಟ್ ಸ್ಥಾಪಿಸಿದರು. ಬ್ಯಾಂಕ್ ಕೈಗಾರಿಕೆಯ ಅಭಿವೃದ್ಧಿಗೆ ನೀಡಿದ್ದ ನೆರವು ಆ ಕಾಲದಲ್ಲೇ ಮನೆಮಾತಾಗಿತ್ತು. ಎಲ್ಲಾ ಬ್ಯಾಂಕುಗಳ ಸಂಘವೊಂದನ್ನು ಸ್ಥಾಪಿಸಿ, ಬ್ಯಾಂಕುಗಳ ಹಿತಾಸಕ್ತಿಯನ್ನೂ ಕೈಗಾರಿಕೆಯ ಸರ್ವತೋಮುಖ ಅಭಿವೃದ್ಧಿಯನ್ನೂ ಚಾಲನೆಗೊಳಿಸಿದವರು ಸೇಠ್ ಪ್ರಾಣಲಾಲ್ ದೇವಕರಣ್ ನಾನ್‌ಜಿ.

ರಾಷ್ಟ್ರೀಕರಣದ ಅನಂತರವೂ ಅವರ ಕುಟುಂಬದ ಹೆಸರಿನ ಹ್ರಸ್ವರೂಪ ಬ್ಯಾಂಕಿನೊಂದಿಗೇ ವಿಲೀನಗೊಂಡಿದೆ.

ಅದರಂತೆ ಕರ್ನಾಟಕದ ಬ್ಯಾಂಕಿಂಗ್ ಇತಿಹಾಸದಲ್ಲಿ ಡಾ॥ ತೋನ್ಸೆ ಅನಂತ ಮಾಧವ ಪೈ ಪವಾಡ ಸದೃಶ ವ್ಯಕ್ತಿ. 1898ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ತೋನ್ಸೆ ಗ್ರಾಮದ ಕಲ್ಯಾಣಪುರದಲ್ಲಿ ಜನಿಸಿದ ಪೈರವರು ರೋಗ, ದಾರಿದ್ರ್ಯ, ಅಸಮಾನತೆಗಳಿಗೆ ಸ್ವಸಹಾಯ, ಸ್ವಾವಲಂಬನೆಗಳೇ ಮದ್ದೆಂದು ನಂಬಿದ್ದವರು. ಹುಟ್ಟೂರಿನ ಶಾಲೆ ಉಪಾಧ್ಯಾಯರಿಲ್ಲದೆ ಮುಚ್ಚುವ ಸ್ಥಿತಿ ಬಂದಾಗ ತಮ್ಮ ಉನ್ನತ ವಿದ್ಯಾಭ್ಯಾಸ ನಿಲ್ಲಿಸಿ. ತಾವೇ ಶಾಲೆಯ ಮುಖ್ಯೋಪಾಧ್ಯಾಯರಾದರು. ಮಹಿಳಾ ರೋಗಿಯೊಬ್ಬಳು ಔಷಧ ವೆಚ್ಚ ಭರಿಸಲಾರದೆ ನರಳಿದ್ದನ್ನು ಕಂಡು ಉಳಿತಾಯ ಪ್ರವೃತ್ತಿಯೇ ಇದಕ್ಕೆ ಪರಿಹಾರವೆಂದು ಅಣ್ಣ ಉಪೇಂದ್ರರವರ ಜತೆ ಸೇರಿ 1925ರಲ್ಲಿ ಕೆನರಾ ಇಂಡಸ್ಟ್ರಿಯಲ್ ಅಂಡ್ ಬ್ಯಾಂಕಿಂಗ್ ಸಿಂಡಿಕೇಟ್ ಲಿ. (ಇಂದಿನ ಸಿಂಡಿಕೇಟ್ ಬ್ಯಾಂಕ್) ಸ್ಥಾಪಿಸಿದರು. ಸಣ್ಣ ಉಳಿತಾಯಕ್ಕೆ ಉತ್ತೇಜನ ನೀಡುವ ದೃಷ್ಟಿಯಿಂದ 1928ರಷ್ಟು ಹಿಂದೆ ದಿನಕ್ಕೆ ಎರಡಾಣೆ ಉಳಿಸಲು ಅವಕಾಶವಿದ್ದ 'ಪಿಗ್ಮಿ ಯೋಜನೆ'ಯನ್ನು ಜಾರಿಗೆ ತಂದರು. 1962ರ ವರೆಗೂ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರಾಗಿ 1967ರ ವರೆಗೂ ಅದರ ಅಧ್ಯಕ್ಷರಾಗಿ ಸಿಂಡಿಕೇಟ್ ಬ್ಯಾಂಕನ್ನು ಶ್ರೇಯೋಭಿವೃದ್ಧಿಯ ಪಥಕ್ಕೆ ತಂದವರು.

ಡಾ॥ ಪೈರವರ ಸಾಧನೆ ಬ್ಯಾಂಕಿಂಗ್ ಕ್ಷೇತ್ರಕ್ಕೆ ಸೀಮಿತವಾದುದಲ್ಲ. ಮಣಿಪಾಲದ ಬೋಳುಗುಡ್ಡವನ್ನು ಹರಾಜಿನಲ್ಲಿ ಕೊಂಡು ಅದನ್ನು ವೈದ್ಯಕೀಯ ತಂತ್ರಜ್ಞಾನ ಶಿಕ್ಷಣದ ನಂದನವನವನ್ನಾಗಿಸಿದರು. ಬಗೆಬಗೆಯ ಗ್ರಾಮೋದ್ಯೋಗಗಳನ್ನು ಸ್ಥಾಪಿಸಿ ಬೆಳೆಸಿದರು. ಅವರ ಕಲ್ಪನೆಯ ಕೂಸಾದ ಮಣಿಪಾಲ್ ಅಕಾಡೆಮಿ ಆಫ್ ಜನರಲ್ ಎಜುಕೇಷನ್ ಹಲವಾರು ಶಾಲಾ ಕಾಲೇಜುಗಳನ್ನು ನಡೆಸುತ್ತಿದೆ. ಮಣಿಪಾಲದಲ್ಲಿ ಮೆಡಿಕಲ್ ಕಾಲೇಜು, ಎಂಜಿನಿಯರಿಂಗ್ ಕಾಲೇಜುಗಳಿಗೆ ಪೈರವರ ದೇಣಿಗೆ, ದುಡಿಮೆಗಳು ಅವಿಸ್ಮರಣೀಯವಾದವು. ಉಡುಪಿಯಲ್ಲಿ ಕಾಲೇಜ್ ಒಂದನ್ನು ಆರಂಭಿಸಲು ದೇಣಿಗೆ ಸಂಗ್ರಹಿಸಿ, ಕಾಲೇಜು ಪ್ರಾರಂಭವಾಗದಿದ್ದಾಗ, ಹಣವನ್ನೆಲ್ಲಾ ಹಿಂದಿರುಗಿಸಿದ ನಿಷ್ಠಾವಂತ. ತಮ್ಮೆಲ್ಲ ಆಸ್ತಿ ಅಡವಿಟ್ಟು ಪ್ರತಿಷ್ಠಿತ ಎಂ.ಜಿ.ಎಂ. ಕಾಲೇಜು ಸ್ಥಾಪನೆಯಾಗಲು ಪ್ರೇರಕರಾದರು. ಉದ್ಯಮಶೀಲತೆಯನ್ನು ಅಭಿವೃದ್ಧಿಪಡಿಸಲು ಮಣಿಪಾಲ್ ಇಂಡಸ್ಟ್ರೀಸ್ (ಪ್ರೈ)ಲಿ. ಸ್ಥಾಪಿಸಿದರು. ರೋಟರಿ ಸದಸ್ಯರಾಗಿ ಸಮಾಜಸೇವೆಯಲ್ಲೂ ಆಸಕ್ತರಾದರು. ಮಣಿಪಾಲದಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ಯಶಸ್ವಿಯಾಗಲು ಕಾರಣಕರ್ತರಾದರು. ಡಾ॥ ಟಿ.ಎಂ.ಎ. ಪೈ ಹಲವಾರು ಯೋಜನೆಗಳ ಕನಸುಗಾರ. ಆ ಕನಸುಗಳನ್ನು ಕ್ರಮಬದ್ಧವಾಗಿ ರೂಪಿಸಿದ ಯೋಜನೆಗಾರ. ಯೋಜನೆಗಳನ್ನೆಲ್ಲ ಕಾರ್ಯಗತಗೊಳಿಸಿದ ಶ್ರದ್ಧಾವಂತ ದುಡಿಮೆಗಾರ.

ಭಾರತದ ಹಲವಾರು ಬ್ಯಾಂಕುಗಳ ಉಗಮದ ಹಿಂದೆ ಇಂಥ ಪ್ರಾತಃಸ್ಮರಣೀಯ ಚೇತನಗಳ ಅವಿರತ ದುಡಿಮೆ, ಕಾಣ್ಕೆಗಳ ಅಧೋರಚನೆ ಇರುವುದು ನಮ್ಮ ದೇಶಕ್ಕೆ ಹೆಮ್ಮೆ ತಾರದೆ? ●

# ಪ್ರಶ್ನೋತ್ತರ

**ಪ್ರಶ್ನೆ:**

## ಟಿ. ಎಸ್. ನಾಗಾನಂದ

ಭಾರತೀಯ ಸ್ಟೇಟ್ ಬ್ಯಾಂಕ್
ಜೆ. ಪಿ. ನಗರಶಾಖೆ, ಬೆಂಗಳೂರು

### ಋಣ ಒಪ್ಪಿಗೆ/ಪುನರುಜ್ಜೀವನ ಪತ್ರಗಳಿಗೆ ಸ್ಟಾಂಪು ಶುಲ್ಕದ ಆವಶ್ಯಕತೆ ಇದೆಯೆ?

**ಉತ್ತರ:**

## ರಾಜಾರಾಮ ಹೆಗಡೆ

ಭಾರತೀಯ ಸ್ಟೇಟ್ ಬ್ಯಾಂಕ್
ಸ್ಥಳೀಯ ಪ್ರಧಾನ ಕಛೇರಿ, ಬೆಂಗಳೂರು

ಋಣ ಒಪ್ಪಿಗೆ/ಪುನರುಜ್ಜೀವನ ಪತ್ರಗಳು ಯಾವ ಅಧಿನಿಯಮಕ್ಕೆ ಒಳಪಡುತ್ತವೆ ಎನ್ನುವದರ ಹಿನ್ನೆಲೆಯಲ್ಲಿ ಈ ಪ್ರಶ್ನೆಯನ್ನು ಪರಿಶೀಲಿಸಬೇಕಾಗುತ್ತದೆ. ಹೀಗೆ ಪರಿಶೀಲಿಸುವಾಗ, ಪಕ್ಷಗಾರರ ಉದ್ದೇಶವೂ ಮುಖ್ಯ ಪಾತ್ರವನ್ನು ವಹಿಸುತ್ತದೆ.

ಋಣ ಒಪ್ಪಿಗೆ ಪತ್ರಗಳನ್ನು ಅವಧಿ ಪರಿಮಿತಿ ಅಧಿನಿಯಮ (ಪ್ರಕರಣ 18)ಕ್ಕೆ ಸಂಬಂಧಿಸಿ ತೆಗೆದುಕೊಳ್ಳಬಹುದು. ಬ್ಯಾಂಕುಗಳಲ್ಲಿ ಹೆಚ್ಚು ಪ್ರಚಲಿತವಿರುವ ಋಣ ಒಪ್ಪಿಗೆ ಪತ್ರಗಳಿವು. ಇಲ್ಲವೆ ಸ್ಟಾಂಪ್ ಅಧಿನಿಯಮದ (ಅನುಚ್ಛೇದ ೧ ಅನುಸೂಚಿ ೧) ಅಡಿಯಲ್ಲಿಯೂ ತೆಗೆದುಕೊಳ್ಳಬಹುದು. ಇವೆರಡು ಅಧಿನಿಯಮಗಳ ಅಡಿಯ ಋಣ ಒಪ್ಪಿಗೆ ಪತ್ರಗಳಲ್ಲಿ ಮಹತ್ವದ ಅಂತರವಿದೆ. ಅವಧಿ ಪರಿಮಿತಿ ಅಧಿನಿಯಮದ ಅಡಿಯಲ್ಲಿನ ಋಣ ಒಪ್ಪಿಗೆ, ಯಾವದೇ ಸ್ವತ್ತು ಅಥವಾ ಹಕ್ಕುಗಳಿಗೆ ಸಂಬಂಧಿಸಿ ಋಣ ಒಪ್ಪಿಗೆ ನೀಡುತ್ತದೆ. ಆದರೆ ಸ್ಟಾಂಪು ಅಧಿನಿಯಮದ ಋಣ ಒಪ್ಪಿಗೆ ಯಾವದೇ ಪುಸ್ತಕ ಅಥವಾ ಕಾಗದದಲ್ಲಿ (ಸಾಲ ನೀಡಿದವನ ಕಬ್ಜೆಯಲ್ಲಿ) ಇರುವ ಋಣಕ್ಕೆ ಸಂಬಂಧಿಸಿ, ಪುರಾವೆಯನ್ನು ಒದಗಿಸುತ್ತದೆ. ಅವಧಿ ಪರಿಮಿತಿ ಅಧಿನಿಯಮದ ಋಣ ಒಪ್ಪಿಗೆ ಪತ್ರ ಬೇರೆ ಹೊಣೆಗಾರಿಕೆಯನ್ನು ಊಹಿಸುತ್ತದೆ. ಅದರ ಉದ್ದೇಶ ಕೇವಲ ಅವಧಿ ಪರಿಮಿತಿಯನ್ನು ಉಳಿಸಿಕೊಳ್ಳುವದು ಮಾತ್ರ ಆಗಿರುತ್ತದೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ, ಅವಧಿ ಪರಿಮಿತಿ ಅಧಿನಿಯಮಕ್ಕೆ ಸಂಬಂಧಿಸಿ, ಋಣ ಒಪ್ಪಿಗೆ ಪತ್ರಗಳನ್ನು ತೆಗೆದುಕೊಂಡಿದ್ದಾದರೆ, ಅದಕ್ಕೆ ಯಾವುದೇ ಸ್ಟಾಂಪು ಶುಲ್ಕದ ಆವಶ್ಯಕತೆಯಿಲ್ಲ. ಆದರೆ ಒಂದು ವೇಳೆ ತೆಗೆದುಕೊಂಡಿರುವ ಋಣ ಒಪ್ಪಿಗೆ ಪತ್ರ ಸ್ಟಾಂಪು ಅಧಿನಿಯಮವನ್ನು (ಅನುಚ್ಛೇದ ೧ ಅನುಸೂಚಿ ೧) ಅನ್ವಯಿಸಿದ್ದಾದರೆ, ಅಗತ್ಯವಿರುವ ಸ್ಟಾಂಪ್ ಶುಲ್ಕವನ್ನು ನೀಡಬೇಕಾಗುತ್ತದೆ. ●

## ಸ್ಟಾಂಪು ಬಗೆಗಳು

ಸ್ಟಾಂಪುಗಳು ಮೂರು ಬಗೆ: ನ್ಯಾಯಾಲಯಗಳಲ್ಲಿ ನೀಡಲಾದ ಹೇಳಿಕೆ ಅಥವಾ ಅರ್ಜಿಗಳಿಗೆ ಸಂಬಂಧಿಸಿದ್ದೊಂದು. ನ್ಯಾಯಿಕ (ಜುಡಿಷಿಯಲ್) ಅಥವಾ ನ್ಯಾಯಾಲಯ ಶುಲ್ಕ ಸ್ಟಾಂಪ್ ಎಂದು ಇದರ ಹೆಸರು. ನ್ಯಾಯಾಲಯದ ಹೊರಗೆ ರಚಿಸಲಾದ ಪತ್ರಗಳಿಗೆ (ಉದಾ: ಸ್ವತ್ತಿನ ವರ್ಗಾವಣೆ) ಸಂಬಂಧಿಸಿದ್ದು ಇನ್ನೊಂದು. ನ್ಯಾಯಿಕೇತರ (ನಾನ್-ಜುಡಿಷಿಯಲ್) ಸ್ಟಾಂಪ್ ಎಂದು ಇದನ್ನು ಕರೆಯುತ್ತಾರೆ. ಅಂಚೆ ಕಛೇರಿಯ ಮೂಲಕ ಕಳಿಸಲಾದ ಪತ್ರ ಮುಂತಾದವಕ್ಕೆ ಹಚ್ಚುವುದು ಮತ್ತೊಂದು. ಇದು ಅಂಚೆ ಸ್ಟಾಂಪು. ಮೊದಲನೆಯ ಎರಡು ಬಗೆಯ ಸ್ಟಾಂಪುಗಳಿಂದ ಪಡೆದ ಆದಾಯ ರಾಜ್ಯ ಸರ್ಕಾರಗಳಿಗೆ ಸೇರುತ್ತದೆ. ಅಂಚೆ ಸ್ಟಾಂಪು ಆದಾಯ ಕೇಂದ್ರ ಸರ್ಕಾರಕ್ಕೆ ಹೋಗುತ್ತದೆ.

# ಪರಿಷ್ಕೃತ ಬ್ಯಾಂಕ್ ಸೇವಾಶುಲ್ಕಗಳು

## ಜುಲೈ ೧, ೧೯೯೦ರಿಂದ

'ರಂ'

### 1 ಪಹಣಿ ಹಾಳೆ ಶುಲ್ಕ

ಚಾಲ್ತಿ ಖಾತೆದಾರರಿಗೆ ಕೆಳಕಂಡ ವಿನಾಯ್ತಿಗೆ ಒಳಪಟ್ಟು ಪ್ರತಿ ಹಾಳೆಗೆ ರೂ 25 ಶುಲ್ಕ ವಿಧಿಸಲಾಗುವುದು (ಹಾಳೆ ಎಂದರೆ ಸುಮಾರು 50 ನಮೂದುಗಳುಳ್ಳ ಪಹಣಿ ಹಾಳೆಯ ಒಂದು ಪಾರ್ಶ್ವ).

ವಿನಾಯ್ತಿ

ಸರಕಾರಿ ಶಿಲ್ಕು 1,500ರಿಂದ 5,000ದ ವರೆಗೆ 3 ಹಾಳೆಗಳು

ಸರಾಸರಿ ಶಿಲ್ಕು ರೂ. 5,000ಕ್ಕಿಂತ ಹೆಚ್ಚು ಆದರೆ ರೂ. 10.000ಕ್ಕಿಂತ ಹೆಚ್ಚಿಲ್ಲದಿದ್ದರೆ 5 ಹಾಳೆಗಳು

ಸರಾಸರಿ ಶಿಲ್ಕುರೂ. 10,000ಕ್ಕಿಂತ ಹೆಚ್ಚು ರೂ. 25,000ಕ್ಕಿಂತ ಹೆಚ್ಚಿಲ್ಲ: 10 ಹಾಳೆಗಳು ಸರಾಸರಿ ಶಿಲ್ಕು 25,000ಕ್ಕಿಂತ ಹೆಚ್ಚಿದ್ದರೆ ಪಹಣಿ ಹಾಳೆ ಶುಲ್ಕ ಇಲ್ಲ.

### 2 ನಕಲು ಪಾಸ್ ಪುಸ್ತಕ

ಲೆಕ್ಕ ವಿವರಣೆಯ ಹೆಚ್ಚಿನ ಪ್ರತಿಗಳ ಶುಲ್ಕ: ನಕಲು ಪಾಸು ಪುಸ್ತಕಕ್ಕೆ ರೂ.3 ಮತ್ತು ಅದರಲ್ಲಿ ನಮೂದಿಸುವ ಪ್ರತಿ ಪಹಣಿಯ ನಮೂದಿಗೆ ರೂ. 2. ಲೆಕ್ಕ ವಿವರಣೆಯ ಹೆಚ್ಚಿನ ಪ್ರತಿಗೆ ಪ್ರತಿ ಪಹಣಿ ಹಾಳೆಗೆ ರೂ. 2.

### 3 ಪಾವತಿ ನಿಲುಗಡೆ ಆದೇಶ

ಪ್ರತಿ ಸಂಲೇಖಕ್ಕೆ ರೂ 10 ಶುಲ್ಕ. ಆದರೆ ಯಾವುದೇ ಒಂದು ಸಂದರ್ಭದಲ್ಲಿ ವಿಧಿಸಬಹುದಾದ ಗರಿಷ್ಠ ಶುಲ್ಕ ರೂ. 20.

### 4 ಸ್ಥಾಯೀ ಆದೇಶಗಳು

ಅದೇ ಶಾಖೆಯಲ್ಲಿರುವ ಇತರ ಗ್ರಾಹಕರ ಖಾತೆಗೆ ಜಮಾ ಮಾಡುವ ಒಂದು ಆದೇಶಕ್ಕೆ ರೂ. 3.

ಬೇರೆ ಕೇಂದ್ರದಲ್ಲಿನ ಖಾತೆಗೆ ಜಮಾ ಮಾಡುವುದಾದಲ್ಲಿ ಅದಕ್ಕೆ ಸಂಬಂಧಿಸಿದ ರವಾನೆ ಶುಲ್ಕ ಹಾಗೂ ಅಂಚೆ ವೆಚ್ಚವನ್ನು ವಿಧಿಸಲಾಗುವುದು.

### 5 ಸಾಲ/ಉದರಿ ಸಂಸ್ಕರಣ ಶುಲ್ಕ

ಅವಧಿ ಸಾಲವೂ ಸೇರಿದಂತೆ ಎಲ್ಲಾ ತರದ ಉದರಿಯ ಮೇಲೆ (2 ಲಕ್ಷಕ್ಕೂ ಮೀರಿದ ಸಾಲದ ಮೇಲೆ) ಸಾಲ ಮಂಜೂರಾತಿಯ ಸಮಯದಲ್ಲಿ ಹಾಗೂ ನವೀಕರಣದ ಸಂದರ್ಭದಲ್ಲಿ ಪ್ರತಿ ಲಕ್ಷಕ್ಕೆ ಅಥವಾ ಅದರ ಭಾಗಕ್ಕೆ ರೂ75 ಶುಲ್ಕ. ಗರಿಷ್ಟಮಿತಿ ರೂ. 7,500.

### 6 ಹಣರವಾನೆ (ತಗಾದೆ ಹುಂಡಿ, ಅಂಚೆ ವರ್ಗಾವಣೆ, ತಂತಿ ವರ್ಗಾವಣೆ)

ರೂ. 500ರ ವರೆಗೆ ರೂ. 2
ರೂ. 500ಕ್ಕಿಂತ ಹೆಚ್ಚು ರೂ.1,000 ವರೆಗೆ ರೂ. 5
ರೂ. 1,000ಕ್ಕಿಂತ ಹೆಚ್ಚು ರೂ. 2,500 ವರೆಗೆ ರೂ. 10
ರೂ. 2,500ಕ್ಕಿಂತ ಹೆಚ್ಚು ರೂ. 5000 ವರೆಗೆ ರೂ. 12
ರೂ. 5,000ಕ್ಕಿಂತ ಹೆಚ್ಚು ರೂ. 10,000 ವರೆಗೆ ರೂ. 25
ರೂ. 10000ಕ್ಕಿಂತ ಹೆಚ್ಚು: ಸಾವಿರಕ್ಕೆ ಅಥವಾ ಅದರ ಭಾಗಾಂಶಕ್ಕೆ ರೂ. 2.50ರಂತೆ ಗರಿಷ್ಟ ರೂ. 1500

### 7 ಬ್ಯಾಂಕರರ ಚೆಕ್ಕುಗಳು

ರೂ. 500ರ ವರೆಗೆ ರೂ. 2
ರೂ. 500ಕ್ಕಿಂತ ಹೆಚ್ಚು ಆದರೆ ರೂ. 5,000ಕ್ಕಿಂತ ಹೆಚ್ಚಿಲ್ಲ: ರೂ. 5
ರೂ. 5,000ಕ್ಕಿಂತ ಹೆಚ್ಚು ಆದರೆ ರೂ. 10,000ಕ್ಕಿಂತ ಹೆಚ್ಚಿಲ್ಲ: ರೂ. 12
ರೂ. 10,000ಕ್ಕಿಂತ ಹೆಚ್ಚು: ರೂ. 25

### 8 ಬದಲಿ ಸಂಲೇಖಗಳ ನೀಡಿಕೆ

ಕಳೆದುಹೋದ ಪ್ರವಾಸಿ ಚೆಕ್ಕುಗಳು : ಶೇ 0.50. ಕನಿಷ್ಠ ರೂ. 5
ರೂ. 500ಕ್ಕೆ ಮೀರಿದ ಕಳೆದುಹೋದ ತಗಾದೆ ಹುಂಡಿಗಳ ಬದಲಿ ನೀಡಿಕೆಗೆ ರೂ. 15

### 9 ಬ್ಯಾಂಕ್ ಖಾತರಿಗಳು

ರೂ. 25.000ದ ವರೆಗಿನ ಖಾತರಿಗೆ: ಪ್ರತಿ ತಿಂಗಳಿಗೆ ಪ್ರತಿ ನೂರು ರೂಪಾಯಿಗೆ 20 ಪೈಸೆಯಂತೆ ಕನಿಷ್ಠ ರೂ. 50

ರೂ. 25,000ಕ್ಕಿಂತ ಹೆಚ್ಚಿನ ಬ್ಯಾಂಕ್ ಖಾತರಿಗೆ: ಪ್ರತಿ ತಿಂಗಳಿಗೆ ಪ್ರತಿ ನೂರು ರೂ.ಗೆ 15 ಪೈಸೆಯಂತೆ

### 10 ವಸೂಲಿ ಹುಂಡಿಗಳಿಗೆ

ರೂ. 1,000ದ ವರೆಗೆ ರೂ. 5
ರೂ. 1,000ಕ್ಕಿಂತ ಹೆಚ್ಚು ಆದರೆ ರೂ. 2,500ಕ್ಕಿಂತ ಹೆಚ್ಚಿಲ್ಲ: ರೂ. 10
ರೂ. 2,500ಕ್ಕಿಂತ ಹೆಚ್ಚು ಆದರೆ ರೂ. 5,000ಕ್ಕಿಂತ ಹೆಚ್ಚಿಲ್ಲ: ರೂ. 12
ರೂ. 5,000ಕ್ಕಿಂತ ಹೆಚ್ಚು ಆದರೆ ರೂ. 10,000ಕ್ಕಿಂತ ಹೆಚ್ಚಿಲ್ಲ : ರೂ. 40
ರೂ. 10,000ಕ್ಕಿಂತ ಹೆಚ್ಚು : ಪ್ರತಿ ಸಾವಿರ ಅಥವಾ ಅದರ ಬಾಗಾಂಶಕ್ಕೆ ರೂ. 5 ಗರಿಷ್ಠ ರೂ. 1,500

## 11 ವಸೂಲಿ ಚೆಕ್ಕುಗಳು

ರೂ. 1,000ದ ವರೆಗೆ ರೂ. 3
ರೂ. 1,000ಕ್ಕಿಂತ ಹೆಚ್ಚು ರೂ. 2,500ಕ್ಕಿಂತ ಹೆಚ್ಚಿಲ್ಲ : ರೂ. 10
ರೂ. 2,500ಕ್ಕಿಂತ ಹೆಚ್ಚು ರೂ.5,000ಕ್ಕಿಂತ ಹೆಚ್ಚಿಲ್ಲ: ರೂ. 12
ರೂ. 5,000ಕ್ಕಿಂತ ಹೆಚ್ಚು 1,000 ಹೆಚ್ಚಿಲ್ಲ: ರೂ. 25
ರೂ. 10,000ಕ್ಕಿಂತ ಹೆಚ್ಚು ಪ್ರತಿ ಸಾವಿರ ಅಥವಾ ಅದರ ಭಾಗಾಂಶ ರೂ. 5 ಗರಿಷ್ಠ 1500

## 12 ವಸೂಲಿಗಾಗಿ ಸ್ವೀಕರಿಸಿದ ಚೆಕ್ಕು/ಹುಂಡಿಗಳು

ವಸೂಲಿಯಾಗದಿದ್ದಾಗ ವಿಧಿಸುವ ನಿರ್ವಹಣಾ ಶುಲ್ಕ
ಪರಸ್ಥಳದ ಪಾವತಿಯಾಗಬೇಕಾದ ಚೆಕ್ಕುಗಳು : ನಿರ್ದಿಷ್ಟ ವಸೂಲಿ ಶುಲ್ಕದ ಅರ್ಧದಷ್ಟು, ಕನಿಷ್ಠ ರೂ. 10.
ಅದೇ ಊರಿನಲ್ಲಿ ಅಥವಾ ಬೇರೆ ಊರಿನಲ್ಲಿ ಪಾವತಿಯಾಗುವ ಹುಂಡಿಗಳು } ನಿರ್ದಿಷ್ಟ ವಸೂಲಿ ಶುಲ್ಕದ ಅರ್ಧಭಾಗ ಕನಿಷ್ಠ ರೂ. 15

## 13 ರೂಪಾಯಿ ಪ್ರವಾಸಿ ಚೆಕ್ಕುಗಳು

ಪ್ರತಿ ನೂರು ರೂಪಾಯಿಗೆ ಪೈಸೆ 50; ಕನಿಷ್ಠ ರೂ. 5

## 14 ಕರೆ ಠೇವಣಿ ರಶೀತಿ ನೀಡಿಕೆ

ಪ್ರತಿ ರಶೀತಿಗೆ ರೂ. 5

## 15 ಕಾಲಿಗ್ರ ಚೆಕ್ ಶುಲ್ಕ

ಕಾಲಿಗ್ರ ಚೆಕ್ಕುಗಳು ತೀರುವೆ ಮನೆಯಲ್ಲಿ ಸಂಸ್ಕರಣಗೊಳ್ಳುವ ಮದರಾಸು, ಹೊಸ ದೆಹಲಿ, ಬೊಂಬಾಯಿ, ಕಲ್ಕತ್ತಾ ನಗರಗಳಲ್ಲಿ ವ್ಯಕ್ತಿಗಳ ಉಳಿತಾಯ ಖಾತೆಗಳನ್ನುಳಿದು ಇತರ ಖಾತೆಗಳಿಗೆ ನೀಡುವ ಚೆಕ್‌ಗಳಿಗೆ ಪ್ರತಿ ಚೆಕ್‌ಗೆ ರೂ. 1ರಂತೆ ಶುಲ್ಕ ವಿಧಿಸಲಾಗುವುದು.

---

# ಸಂಪಾದಕೀಯ

[1ನೇ ಪುಟದಿಂದ ಮುಂದುವರಿದುದು]

ವಂಥದೂ ಬೇರೊಂದಿಲ್ಲ ಎಂಬ ಸತ್ಯದ ಮನವರಿಕೆ ಆಗದಿರುವುದು ದೇಶಕ್ಕೇ ಒಳ್ಳೆಯದಲ್ಲ.

ಪ್ರತಿಕೂಲಕರ ವಾತಾವರಣದಲ್ಲೂ ಪ್ರಾದೇಶಿಕ ಭಾಷೆಯನ್ನು—ಕನ್ನಡವನ್ನು—ಅಗತ್ಯವಿದ್ದಲ್ಲೆಲ್ಲ ಬಳಸಲು ಮೈಸೂರು ಬ್ಯಾಂಕು ಈಚಿನ ದರ್ಶಗಳಲ್ಲಿ ಯತ್ನಿಸುತ್ತಿರುವುದು ಸ್ವಾಗತಾರ್ಹ. ಸಂವಿಧಾನದಲ್ಲಿ ಲಭ್ಯವಿರುವ ಅವಕಾಶಗಳನ್ನು ಸರಿಯಾಗಿ ಬಳಸಿಕೊಂಡರೂ ಸಾಕು. ಮಾಡಬಾರದ್ದನ್ನೇನೋ ಮಾಡುತ್ತಿದ್ದೇವೆಂಬ ಅಂಜಿಕೆ ಯಾರಿಗೂ ಇರಬಾರದು. ಕನ್ನಡವನ್ನು ಬಳಸುವಲ್ಲಿ ಮೈಸೂರು ಬ್ಯಾಂಕು ನಿಧಾನವಾಗಿಯಾದರೂ ದೃಢವಾದ ಹೆಜ್ಜೆ ಹಾಕುತ್ತಿದೆ. ಬ್ಯಾಂಕಿನ ಪ್ರಧಾನ ಕಛೇರಿಯಲ್ಲಿ ಕನ್ನಡ ವಿಭಾಗವೊಂದು ಆರಂಭವಾಗಿದೆ. ಉತ್ಸಾಹಿ ಹಾಗೂ ನಿಷ್ಠಾವಂತ ಕಾರ್ಯಕರ್ತರು ಇದನ್ನು ನಿರ್ವಹಿಸುತ್ತ ಬಂದಿದ್ದಾರೆ. ಜನಸಾಮಾನ್ಯರಿಗೆ ಉಪಯುಕ್ತವಾಗುವ ಬ್ಯಾಂಕಿನ ಅನೇಕ ನಮೂನೆಗಳನ್ನು ಇವರು ಕನ್ನಡಕ್ಕೆ ತಂದಿದ್ದಾರೆ.

ಇನ್ನೊಂದು ಪ್ರಮುಖ ಕ್ರಮವೆಂದರೆ, ಸಣ್ಣ ವ್ಯವಹಾರಗಳಿಗೆ ಸಂಬಂಧಿಸಿದ ನಾನಾ ನಿಯಮ ನಿಬಂಧನೆಗಳನ್ನೊಳಗೊಂಡ ಕೈಪಿಡಿಯ ಕನ್ನಡ ಅನುವಾದ, ಇದಕ್ಕಾಗಿ ೧೯೮೬ರ ಜುಲೈ ತಿಂಗಳಲ್ಲಿ ಒಂದು ಭಾಷಾಂತರ ಕಮ್ಮಟವನ್ನು ಸಂಘಟಿಸಲಾಗಿತ್ತು. ಅದರಲ್ಲಿ ಭಾಗವಹಿಸಿದ ಸಮರ್ಥ ಉತ್ಸಾಹಿಗಳು ಕಿರೀಟ ಚತುರ್ಥ ಆಕಾರದ ಸುಮಾರು ೨೫೦ ಪುಟಗಳ ಆ ಕೈಪಿಡಿಯನ್ನು ಕನ್ನಡಿಸಿದರು. ಆ ಅನುವಾದವನ್ನು ಆಮೂಲಾಗ್ರವಾಗಿ ಪರಿಶೋಧಿಸಿ ಇದೀಗ ಪ್ರಕಟಿಸಲಾಗಿದೆ. ಇದರಿಂದ ಬ್ಯಾಂಕಿಂಗ್ ವ್ಯವಹಾರಕ್ಕೆ ಸಂಬಂಧಿಸಿದ ಪರಿಭಾಷೆ ಕನ್ನಡಕ್ಕೆ ಲಭ್ಯವಾದಂತಾಗಿದೆ. ಇದನ್ನು ಬ್ಯಾಂಕಿನ ಎಲ್ಲ ಉದ್ಯೋಗಿಗಳೂ ಬಳಸಬೇಕು. ಬಳಕೆಯಿಂದ ಇದು ಹೆಚ್ಚು ಪರಿಚಿತವಾಗುತ್ತದೆ; ಸ್ವೀಕಾರಯೋಗ್ಯವಾಗುತ್ತದೆ. ಜನರ ನಡುವಿನ ಸಂಸ್ಥೆಯಾದ ಬ್ಯಾಂಕು ಜನರ ಭಾಷೆಯಲ್ಲೇ ವ್ಯವಹರಿಸುವುದರಿಂದ ಅದರ ಸೇವೆ ಸಾರ್ಥಕವೆನಿಸುತ್ತದೆ.

ಮೈಸೂರು ಬ್ಯಾಂಕಿನ ಈ ಮಹತ್ವದ ಕಾರ್ಯ ಮೆಚ್ಚುಗೆಗೆ ಅರ್ಹವಾಗಿದೆ. ಇದನ್ನು ಆಗಮಾಡಿಸಿದ ಎಲ್ಲರನ್ನೂ ನಾವು ಅಭಿನಂದಿಸುತ್ತೇವೆ. ಈ ಕೆಲಸ ಮುಂದುವರಿಯಲಿ, ಬ್ಯಾಂಕಿಗೆ ಸಂಬಂಧಿಸಿದ ಎಲ್ಲ ಪ್ರಮುಖ ನಮೂನೆಗಳೂ ನಿಯಮನಿಬಂಧನೆಗಳೂ ಇತರ ಸಾಮಗ್ರಿಯೂ ಕನ್ನಡಕ್ಕೆ ಬರಲಿ ಎಂದು ಹಾರೈಸುತ್ತೇವೆ.

# ಬ್ಯಾಂಕಿಂಗ್ ಪ್ರಪಂಚದ

## ಆಜೀವ ಚಂದಾದಾರರು

(ಜೂನ್ 1990ರ ಸಂಚಿಕೆಯಿಂದ ಮುಂದುವರಿದುದು)

**ಶ್ರೀ/ಶ್ರೀಮತಿ**

೮೫೫ ಮಂಜುನಾಥ
೭೫೬ ಸದಲಾಪುರ್
೮೫೭ ಸುಧಾಕರ ನಾಯಕ್
೮೫೮ ಬಿ. ಡಿ. ಜಂಬಗಿ
೮೫೯ ಚಂದ್ರಶೇಖರ
೮೬೦ ಕೆ. ವಿ. ಪ್ರಸನ್ನ
೮೬೧ ಎನ್. ಪ್ರಭಾಕರ್
೮೬೨ ಶೇಖರ್
೮೬೩ ಸಿ. ಕೆ. ರಂಗಾಚಾರಿ
೮೬೪ ಪಿ. ರಾಮಾನುಜಂ
೮೬೫ ಕೆ. ಕೇಶವನ್
೮೬೬ ಸಿ. ವಿದ್ಯಾಶಂಕರ್
೮೬೭ ಹೆಚ್. ಎಸ್. ಕೃಷ್ಣ
೮೬೮ ಟಿ. ಕೃಷ್ಣಮೂರ್ತಿ
೮೬೯ ಎನ್. ಎಸ್. ರಾಧಾಭಾಯಿ
೮೭೦ ಸಿ. ಆರ್. ಎಂ. ಪ್ರಸಾದ್
೮೭೧ ಡಿ. ಡಿ. ಒಡೆಯರ್
೮೭೨ ಉಪಾಧ್ಯ
೮೭೩ **ಭಾರತೀಯ ಸ್ಟೇಟ್ ಬ್ಯಾಂಕ್**
ಆಸ್ಟಿನ್ ಟೌನ್ ಶಾಖೆ (ಬೆಂಗಳೂರು)
೮೭೪ **ಸ್ಟೇಟ್ ಬ್ಯಾಂಕ್ ಆಫ್ ಮೈಸೂರು**
ಬಂಗೂರು ನಗರ ಶಾಖೆ (ದಾಂಡೇಲಿ)

# ಬ್ಯಾಂಕಿಂಗ್ ಪ್ರಪಂಚ

## ಸಂಪುಟ ೧೧, ೧೯೯೦

## ಲೇಖನ ಸೂಚಿ

**(ಲೇಖನ, ಲೇಖಕರು, ಸಂಚಿಕೆ, ಪುಟ)**

# ಬ್ಯಾಂಕಿಂಗ್ ಪ್ರಪಂಚ

## ಸಂಪುಟ ೧೧, ೧೯೯೦

### ಲೇಖಕ ಸೂಚಿ

[ಲೇಖಕರು, ಲೇಖನ, ಸಂಚಿಕೆ, ಪುಟ]

